ಕನ್ನಡ ವಿಶ್ವವಿದ್ಯಾಲಯ

# 'ಗುಬ್ಬಹಳ್ಳಿ ಒಂದು ಅಧ್ಯಯನ'

೨೦೦೭-೦೮ನೇ ಸಾಲಿನ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧ

*ಮಾರ್ಗದರ್ಶಕರು*


**ಪ್ರೊ. ಶುಭಚಂದ್ರ**
ಜೈನಶಾಸ್ತ್ರ ಮತ್ತು ಪ್ರಾಕೃತ ಅಧ್ಯಯನ ವಿಭಾಗ
ಮಾನಸಗಂಗೋತ್ರಿ, ಮೈಸೂರು – ೬


*ಸಂಶೋಧಕ*


**ಹೆಚ್.ಎಂ.ಗಂಗಾಧರಶೆಟ್ಟಿ**
ಎಂ.ಫಿಲ್ ವಿದ್ಯಾರ್ಥಿ



೨೦೦೭-೦೮
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕನ್ನಡ ವಿಶ್ವವಿದ್ಯಾಲಯ

# 'ಗುಬ್ಬಹಳ್ಳಿ ಒಂದು ಅಧ್ಯಯನ'

೨೦೦೭-೦೮ನೇ ಸಾಲಿನ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧ

*ಮಾರ್ಗದರ್ಶಕರು*


**ಪ್ರೊ. ಶುಭಚಂದ್ರ**

ಜೈನಶಾಸ್ತ್ರ ಮತ್ತು ಪ್ರಾಕೃತ ಅಧ್ಯಯನ ವಿಭಾಗ

ಮಾನಸಗಂಗೋತ್ರಿ, ಮೈಸೂರು - ೬


*ಸಂಶೋಧಕ*


**ಎಚ್.ಎಂ.ಗಂಗಾಧರಶೆಟ್ಟಿ**

ಎಂ.ಫಿಲ್ ವಿದ್ಯಾರ್ಥಿ



೨೦೦೭-೦೮

ಕನ್ನಡ ವಿಶ್ವವಿದ್ಯಾಲಯ, ಹಂಪಿ

# ದೃಢೀಕರಣಪತ್ರ

೨೦೦೭–೦೮ನೇ ಸಾಲಿನಲ್ಲಿ ಕ್ರಮ ಸಂಖ್ಯೆ KVTM - ೦೦೧೫೯ರ ವಿದ್ಯಾರ್ಥಿಯಾದ ಎಚ್.ಎಂ.ಗಂಗಾಧರಶೆಟ್ಟಿ ಎಂ.ಫಿಲ್ ಪರೀಕ್ಷೆಯ ಅಂಗವಾಗಿ **ಗುಬ್ಬಹಳ್ಳಿ ಒಂದು ಅಧ್ಯಯನ** ಎಂಬ ವಿಷಯವನ್ನು ಕುರಿತು ನನ್ನ ಮಾರ್ಗದರ್ಶನದಲ್ಲಿ ಸಂಶೋಧನಾ ನಿಬಂಧವನ್ನು ಸಿದ್ಧಪಡಿಸಿದ್ದಾರೆ. ಇದನ್ನು ಇವರು ಈ ಮೊದಲು ಯಾವುದೇ ಬಗೆಯ ಪದವಿ, ಡಿಪ್ಲೊಮಾ ಅಥವಾ ಪ್ರಶಸ್ತಿಗಾಗಿ ಯಾವುದೇ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ಮೈಸೂರು

ದಿನಾಂಕ : 31-08-2008

(ಪ್ರೊ ಶುಭಚಂದ್ರ)
ಜೈನಶಾಸ್ತ್ರ ಮತ್ತು ಪ್ರಾಕೃತ ಅಧ್ಯಯನ ವಿಭಾಗ
ಮಾನಸಗಂಗೋತ್ರಿ, ಮೈಸೂರು – ೫೭೦ ೦೦೬

# ಪ್ರಮಾಣಪತ್ರ

**ಗುಬ್ಬಹಳ್ಳಿ ಒಂದು ಅಧ್ಯಯನ** ಎಂಬ ವಿಷಯದ ಸಂಶೋಧನ ನಿಬಂಧವನ್ನು ಕನ್ನಡ ಎಂ.ಫಿಲ್. ಪದವಿಯ ಕ್ರಮಸಂಖ್ಯೆ KVTM - ೦೦೧೫ರ ವಿದ್ಯಾರ್ಥಿಯಾದ ನಾನು ೨೦೦೭–೦೮ನೇ ಸಾಲಿನ ಪರೀಕ್ಷೆಗಾಗಿ ಪ್ರೊ. ಶುಭಚಂದ್ರ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಈ ನಿಬಂಧವನ್ನು ಯಾವುದೇ ಬಗೆಯ ಪದವಿ, ಡಿಪ್ಲೊಮಾ ಅಥವಾ ಪ್ರಶಸ್ತಿಗಾಗಿ ಯಾವುದೇ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಮೈಸೂರು

ದಿನಾಂಕ: ೩೧–೦೮–೨೦೦೮

**(ಗಂಗಾಧರಶೆಟ್ಟಿ .ಎಚ್.ಎಂ.)**

೨೦೦೭–೦೮ನೇ ಸಾಲಿನ ಎಂ.ಫಿಲ್. ವಿದ್ಯಾರ್ಥಿ

ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

# ಪರಿವಿಡಿ



*****

## ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಕರ್ನಾಟಕ ಅನೇಕ ಸಾಮ್ರಾಜ್ಯಗಳ ತವರುಮನೆಯಾಗಿತ್ತು. ಇದು ಅನೇಕ ಮನೆತನಗಳ ಗಣಿ. ಶಿಲ್ಪಕಲೆಯ ಒಂದು ಕೇಂದ್ರ. ಇದರ ಸಂಸ್ಕೃತಿಯ ಪರಂಪರೆ ವೈಭವಯುತ, ವೈವಿಧ್ಯವಿದ್ದರೂ ಏಕತೆ, ಸಹನೆ ಮತ್ತು ಪರಸ್ಪರ ಹೊಂದಿಕೊಳ್ಳುವ ಮನೋಭಾವ, ವಿವಿಧ ಮತಗಳ ಸಮನ್ವಯ– ಇವು ಇದರ ಸಂಸ್ಕೃತಿಯ ತಿರುಳು. ಈ ತಿರುಳನ್ನು ಇಲ್ಲಿಯ ಅರಸರು, ಸಂತರು, ಕವಿಗಳು, ಬುದ್ಧಿಜೀವಿಗಳು, ಸುಧಾರಕರು– ಬೋಧಕರು ಮತ್ತು ಕಲಾಕಾರರು ಪೋಷಿಸಿದ್ದಾರೆ. ಉತ್ತರ ಭಾರತದ ಆರ್ಯ ಸಂಸ್ಕೃತಿ ಮತ್ತು ದಕ್ಷಿಣ ಭಾರತದ ದ್ರಾವಿಡರ ಸಂಸ್ಕೃತಿಗಳ ಮಿಲನವನ್ನು ಇಲ್ಲಿ ನಾವು ಕಾಣಬಹುದಾಗಿದೆ.

ಭಾರತದ ೨೮ ರಾಜ್ಯಗಳಲ್ಲಿ ಕರ್ನಾಟಕವೂ ಒಂದು. ಇದು ಭಾರತದ ಪರ್ಯಾಯ ದ್ವೀಪದ ಪಶ್ಚಿಮ ಮಧ್ಯಭಾಗದಲ್ಲಿದೆ. ಸುಮಾರು ೧,೯೧,೭೯೧ ಚ.ಕಿ.ಮೀ ವಿಸ್ತೀರ್ಣವನ್ನು ಹೊಂದಿದೆ. ರಾಜ್ಯದ ಉತ್ತರಕ್ಕೆ ಮಹಾರಾಷ್ಟ್ರ, ಪೂರ್ವಕ್ಕೆ ಆಂಧ್ರಪ್ರದೇಶ, ದಕ್ಷಿಣ ಮತ್ತು ಆಗ್ನೇಯಕ್ಕೆ, ತಮಿಳುನಾಡು, ನೈರುತ್ಯಕ್ಕೆ ಕೇರಳ, ವಾಯವ್ಯಕ್ಕೆ ಗೋವಾ ರಾಜ್ಯಗಳು ಹಾಗೂ ಪಶ್ಚಿಮದಲ್ಲಿ ಅರಬ್ಬೀಸಮುದ್ರಗಳು ರಾಜ್ಯದ ಮೇರೆಗಳಾಗಿವೆ. ಅಂದರೆ ಕರ್ನಾಟಕವು ೩ ಕಡೆ ಭೂಪ್ರದೇಶವನ್ನು, ಒಂದು ಕಡೆ ಜಲ ಭಾಗದಿಂದಲೂ ಆವರಿಸಲ್ಪಟ್ಟಿದೆ. ಜನಸಂಖ್ಯೆಯಲ್ಲಿ ಭಾರತದಲ್ಲೇ ೯ನೇ ಸ್ಥಾನದಲ್ಲಿದೆ. ಭಾರತದ ಒಟ್ಟು ಭೌಗೋಳಿಕ ಕ್ಷೇತ್ರದಲ್ಲಿ ಶೇಕಡ ೫,೮೪ ರಷ್ಟನ್ನು ಹೊಂದಿದೆ. ೨೦೦೧ರ ಜನಗಣತಿಯ ಪ್ರಕಾರ ೫,೨೮,೫೦,೫೬೨ ಜನಸಂಖ್ಯೆಯನ್ನು ಹೊಂದಿದೆ.

೧೯೫೬ರ ಭಾಷಾವಾರು ಪ್ರಾಂತ್ಯಗಳ ಪುನರ್ವಿಂಗಡಣೆಯ ಪರಿಣಾಮವಾಗಿ ವಿಶಾಲ ಮೈಸೂರು ಉದಯವಾಯಿತು. ಇದರ ನೆನಪಿಗಾಗಿ ನವೆಂಬರ್ ಮಾಹೆಯಲ್ಲಿ ರಾಜ್ಯೋತ್ಸವವನ್ನು ಆಚರಿಸಲಾಗುತ್ತಿದೆ. ೧೯೭೨ ನವೆಂಬರ್ ೧ರಂದು ವಿಶಾಲ ಕರ್ನಾಟಕ ಎಂದು ಹೆಸರಿಡಲಾಯಿತು.

ಪ್ರಸ್ತುತ ೩೦ ಜಿಲ್ಲೆಗಳು, ೧೭೫ ತಾಲ್ಲೂಕುಗಳು, ೭೪೫ ಹೋಬಳಿಗಳು, ೨೫೪ ಪಟ್ಟಣಗಳನ್ನು, ೨೭,೬೮೩ ಜನವಸತಿ ಹಳ್ಳಿಗಳನ್ನು, ೧೯೨೫ ಜನವಸತಿ ರಹಿತ ಹಳ್ಳಿಗಳನ್ನು ಹೊಂದಿದೆ. ಆಡಳಿತಕ್ಕೆ ಅನುಕೂಲವಾಗುವಂತೆ ನಾಲ್ಕು ವಿಭಾಗಗಳನ್ನು ಮಾಡಲಾಗಿದೆ. ಅವುಗಳೆಂದರೆ,

೧. ಬೆಂಗಳೂರು ವಿಭಾಗ

೨. ಮೈಸೂರು ವಿಭಾಗ

೩. ಬೆಳಗಾವಿ ವಿಭಾಗ

೪. ಗುಲ್ಬರ್ಗ ವಿಭಾಗ

೧೯೯೭ರವರೆಗೆ ೨೦ ಜಿಲ್ಲೆಗಳಿದ್ದವು. ಸ್ವತಂತ್ರ ಸುವರ್ಣ ಮಹೋತ್ಸವದ ಸಂದರ್ಭದಲ್ಲಿ ಅಂದರೆ ೦೪-೦೫-೧೯೯೭ರಲ್ಲಿ ೭ ಜಿಲ್ಲೆಗಳನ್ನು ಹೊಸದಾಗಿ ಸೇರಿಸಲಾಯಿತು. ೧೫-೦೮-೧೯೯೭ರಲ್ಲಿ ೩ ಜಿಲ್ಲೆಗಳು ಅಸ್ಥಿತ್ವಕ್ಕೆ ಬಂದವು. ೨೩-೦೮-೧೯೯೭ರಲ್ಲಿ ೩ ಜಿಲ್ಲೆಗಳು ಅಸ್ಥಿತ್ವಕ್ಕೆ ಬಂದವು. ೨೫-೦೮-೧೯೯೭ರಲ್ಲಿ ಉಡುಪಿ ಜಿಲ್ಲೆ ಅಸ್ಥಿತ್ವಕ್ಕೆ ಬಂದಿತು. ೨೨-೦೬-೨೦೦೭ರಲ್ಲಿ ರಾಮನಗರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳು ಅಸ್ಥಿತ್ವಕ್ಕೆ ಬಂದವು.

ಕನ್ನಡನಾಡು ಸಂಸ್ಕೃತಿಯ ನೆಲೆ ಬಿಡಾಗಿದ್ದು, ಸುಮಾರು ೨೦೦೦ ವರ್ಷಗಳ ಇತಿಹಾಸವನ್ನು ಹೊಂದಿದೆ. ಸಾಂಸ್ಕೃತಿಕ, ಸಾಹಿತ್ಯಿಕ ಕ್ಷೇತ್ರಗಳಲ್ಲಿ ಸಾಕಷ್ಟು ಸಿರಿವಂತಿಕೆಯನ್ನು ಪಡೆದುಕೊಮಡಿದೆ. ಇಂತಹ ಕನ್ನಡನಾಡಿನಲ್ಲಿ ಅನೇಕ ಜಾತಿ, ಧರ್ಮ, ಜನಾಂಗಗಳು ವಿಭಿನ್ನ ರೀತಿಯ ಸಂಸ್ಕೃತಿಯನ್ನು ಹೊಂದಿದ್ದು ಇಂದಿನವರೆಗೂ ಒಂದೆಡೆ ನೆಲೆಸುತ್ತಾ ವೈವಿಧ್ಯತೆಯಲ್ಲಿ ಏಕತೆಯನ್ನು ಕಂಡುಕೊಂಡಿದ್ದಾರೆ. ಸಿಂಧೂಬಯಲಿನ ನಾಗರಿಕತೆ ಹರಪ್ಪ ಮತ್ತು ಮೆಹೆಂಜೊದಾರೊ ಕಾಲದಿಂದಲೂ ವಿಶಿಷ್ಟವಾದ ಸಂಸ್ಕೃತಿಯನ್ನು ನಾವು ನೋಡಿದ್ದೇವೆ.

ಕರ್ನಾಟಕದ ೨೮ ಜಿಲ್ಲೆಗಳಲ್ಲಿ 'ಮಂಡ್ಯ' ಜಿಲ್ಲೆಯೂ ಒಂದು. ಮಂಡ್ಯ ಜಿಲ್ಲೆಯ ಚಾರಿತ್ರಿಕ, ಸಾಹಿತ್ಯಿಕ, ಸಾಂಸ್ಕೃತಿಕ ಇತಿಹಾಸ ತುಂಬಾ ಪ್ರಾಚೀನವಾದುದು. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಮಂಡ್ಯ ಜಿಲ್ಲೆಯು ತನ್ನದೆ ಆದ ಪ್ರಮುಖ ಪಾತ್ರವನ್ನು ವಹಿಸಿದೆ. ಮೈಸೂರು ಕಾಂಗ್ರೆಸ್‌ನ ಉದಯಕ್ಕೆ ಕಾರಣವಾದ ಶಿವಪುರದ ಧ್ವಜ ಸತ್ಯಾಗ್ರಹ ಭಾರತದ ಸ್ವಾತಂತ್ರ್ಯ ಹೋರಾಟದ ಇತಿಹಾಸದಲ್ಲಿ ಪ್ರಮುಖವಾದ ಹೋರಾಟಗಳಲ್ಲಿ ಒಂದು ಎಂದು ದಾಖಲಾಗಿದೆ. ಅಂದಿನ ಧ್ವಜ ಸತ್ಯಾಗ್ರಹದಲ್ಲಿ ಪ್ರಮುಖ ಪಾತ್ರವಹಿಸಿದ ಸಾಹುಕಾರ್ ಚೆನ್ನಯ್ಯ, ಇಂಡವಾಳು ಹೆಚ್.ಹೊನ್ನಯ್ಯ, ಎಚ್.ಕೆ. ವೀರಣ್ಣಗೌಡ ಮುಂತಾದವರು ಈ ಜಿಲ್ಲೆಯವರೆ.

ಮಂಡ್ಯ ಜಿಲ್ಲೆಯು ರಾಜ್ಯದ ಚಿಕ್ಕ ಜಿಲ್ಲೆಗಳಲ್ಲಿ ಒಂದಾಗಿದ್ದರೂ ಹಲವು ಹತ್ತು ವೈಶಿಷ್ಟ್ಯಗಳನ್ನು ಒಳಗೊಂಡ ಜಿಲ್ಲೆಯಾಗಿದೆ. ಮೂಲತಃ ಮೈಸೂರು ಜಿಲ್ಲೆಯ ಭಾಗವಾಗಿದ್ದ ಈ ಪ್ರದೇಶ ತದನಂತರದಲ್ಲಿ ಪ್ರತ್ಯೇಕಗೊಂಡು ರಾಜಕಾರಣ, ಕೃಷಿ, ಚಳುವಳಿ, ಆರ್ಥಿಕ, ಸಾಹಿತ್ಯ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ತನ್ನದೇ ಆದ ಛಾಪು ಮೂಡಿಸಿದೆ.

ಮಂಡ್ಯ ಜಿಲ್ಲೆಯು ಭಾರತದೇಶದ ಕರ್ನಾಟಕ ರಾಜ್ಯದ ದಕ್ಷಿಣ ಭಾಗದ ಮಧ್ಯದಲ್ಲಿದೆ (central belt). ಇದು ಮೈಸೂರು ವಿಭಾಗಕ್ಕೆ ಸೇರಿದ ಜಿಲ್ಲೆಯಾಗಿದ್ದು

ರಾಜ್ಯದ ದಕ್ಷಿಣದಲ್ಲಿ ಜಿಲ್ಲೆಯ ಒಟ್ಟು ವಿಸ್ತೀರ್ಣ ೪೯೬೧ ಚರ ಕಿಲೋಮೀಟರ್‌ಗಳು. ಇದು ಅಸಮ ಆಕಾರದಿಂದಿದ್ದು ಉತ್ತರ ಅಕ್ಷಾಂಶ ೧೨°-೧೩ರಿಂದ ೧೩°-೦೪' ಪೂರ್ವರೇಖಾಂಶ ೭೬°-೧೯' ರಿಂದ ೭೭°-೨೦'ರವರೆಗೆ ಹರಡಿದೆ. ಇದು ನಮ್ಮ ಕರ್ನಾಟಕ ರಾಜ್ಯದ ಸುಮಾರು ೧/೩೯ನೇ ಭಾಗದಷ್ಟಿದೆ. ರಾಜ್ಯದ ಜಿಲ್ಲೆಗಳಲ್ಲಿ ಕೊಡಗನ್ನು ಹೊರತುಪಡಿಸಿದರೆ ಇದೇ ಅತ್ಯಂತ ಚಿಕ್ಕ ವಿಸ್ತೀರ್ಣವುಳ್ಳ ಕಿರಿಯ ಜಿಲ್ಲೆಯಾಗಿದೆ. ಇದು ದಕ್ಷಿಣ ಮತ್ತು ನೈರುತ್ಯದಲ್ಲಿ ಮೈಸೂರು ಜಿಲ್ಲೆ. ಉತ್ತರದಲ್ಲಿ ತುಮಕೂರು ಜಿಲ್ಲೆ, ಪೂರ್ವದಲ್ಲಿ ಬೆಂಗಳೂರು ಜಿಲ್ಲೆ, ವಾಯುವ್ಯದಲ್ಲಿ ಹಾಸನಜಿಲ್ಲೆ ಇವುಗಳಿಂದ ಸುತ್ತುವರೆದಿದೆ.

ಜಿಲ್ಲೆಯ ಹೆಚ್ಚಿನ ಭಾಗ ಸಮತಟ್ಟಾದ ಪ್ರದೇಶದಿಂದ ಕೂಡಿದ್ದು ಅಲ್ಲಲ್ಲಿ ಸಣ್ಣಬೆಟ್ಟಗಳು, ಹೆಚ್ಚು ಎತ್ತರವಲ್ಲದ ಶ್ರೇಣಿಗಳೂ ಇವೆ. ಮಂಡ್ಯ ಜಿಲ್ಲೆ ಸಾಮಾನ್ಯತಃ ಸಮುದ್ರ ಮಟ್ಟಕ್ಕಿಂತ ೭೬೨ರಿಂದ ೯೧೪ ಮೀಟರ್ ಎತ್ತರದಲ್ಲಿದೆ. ಮಳವಳ್ಳಿ ತಾಲ್ಲೂಕಿನ ಪೂರ್ವದ ಅಂಚಿನಲ್ಲಿ ಬಿಳಿಗಿರಿರಂಗನ ಬೆಟ್ಟದ ಸಾಲಿನಿಂದ ಮುಂದುವರಿದ ಕೆಲವು ಬೆಟ್ಟಗಳೂ, ಜಿಲ್ಲೆಯ ದಕ್ಷಿಣ ಅಂಚಿನಲ್ಲಿ ಹುಲಿಕೆರೆ ಮತ್ತು ಕರಿಘಟ್ಟ ಬೆಟ್ಟಗಳ ಸಾಲೂ ಇವೆ. ಕೃಷ್ಣರಾಜಪೇಟೆ ಮತ್ತು ನಾಗಮಂಗಲದ ಸುತ್ತಲೂ ಕೆಲವು ಬೆಟ್ಟಗಳಿವೆ.

ಇಲ್ಲಿ ಮುಖ್ಯವಾಗಿ ಹರಿಯುವ ನದಿಗಳು ಕಾವೇರಿ, ಹೇಮಾವತಿ, ಲೋಕಪಾವನಿ, ಶಿಂಷಾ ಮತ್ತು ವೀರವೈಷ್ಣವಿ. ಈ ನದಿಗಳಲ್ಲದೆ ಬಿಂಡೇನಹಳ್ಳಿ ತೊರೆ. ಹಂದಿಹಳ್ಳಿ, ಹೆಬ್ಬಳ್ಳ ಮತ್ತು ಭೀಮಾ ಮುಂತಾದ ತೊರೆಗಳು ಈ ಜಿಲ್ಲೆಯಲ್ಲಿ ಹರಿಯುತ್ತವೆ. ಈ ನದಿಗಳ ನೀರು ಕೃಷಿಗೆ ಮತ್ತು ಮೀನುಗಾರಿಕೆಗೆ ಅತ್ಯುಪಯುಕ್ತವಾಗಿದೆ. ಈ ನದಿಗಳು ಮಂಡ್ಯಜಿಲ್ಲೆಯನ್ನು ಸಂಪದ್ಭರಿತವನ್ನಾಗಿಯೂ ರಾಜ್ಯದ ಭತ್ತದ ಕಣಜ ಮತ್ತು 'ಸಕ್ಕರೆಯ ಬೀಡು' ಅಥವಾ 'ಸಕ್ಕರೆಯ ನಾಡು' ಎಂಬುದಾಗಿ ಕರೆಸಿಕೊಳ್ಳಲು ಅತ್ಯಂತ ಹೆಚ್ಚಿನ ಸಹಕಾರಿಯಾಗಿವೆ.

ಧಾರ್ಮಿಕ ಕ್ಷೇತ್ರದಲ್ಲಿ ಬಹುಮುಖ್ಯವಾದ ಶೈವ, ವಿಶಿಷ್ಟಾದ್ವೈತದ ಪ್ರಮುಖ ಕೇಂದ್ರಗಳಾಗಿ ಶ್ರೀಆದಿಚುಂದನಗಿರಿ, ಮೇಲುಕೋಟೆಗಳಿರುವುದು ಈ ಜಿಲ್ಲೆಯಲ್ಲಿಯೇ, ಕಾರಣಿಕ ಪುರುಷರಲ್ಲಿ ಒಬ್ಬರಾದ ಪ್ರಸಿದ್ಧ ಮಂಟೆಸ್ವಾಮಿ ಪರಂಪರೆಯ ಕೇಂದ್ರವಾದ ಬೊಪ್ಪಗೌಡನಪುರ ಇರುವುದು ಇಲ್ಲಿಯೇ.

ಕೃಷ್ಣರಾಜಸಾಗರ ಜಲಾಶಯ ಹಾಗೂ ಲೋಕ ವಿಖ್ಯಾತವಾದ ಬೃಂದಾವನ ಉದ್ಯಾನ, ಪ್ರಸಿದ್ಧ ಪಕ್ಷಿಧಾಮವಾದ ರಂಗನತಿಟ್ಟು, ಕೊಕ್ಕರೆಬೆಳ್ಳೂರು, ಈ ನಾಡಿನ ಪ್ರಮುಖ ಜಲಪಾತವಾದ ಶಿವನಸಮುದ್ರ, ಏಷ್ಯಾಖಂಡದಲ್ಲಿಯೇ ಪ್ರಪ್ರಥಮವಾಗಿ ಸ್ಥಾಪಿಸಲ್ಪಟ್ಟ ಜಲವಿದ್ಯುತ್ ಆಗರ ಇರುವುದು ಈ ಜಿಲ್ಲೆಯಲ್ಲಿಯೇ. ಪ್ರಸಿದ್ಧ ಕಾವೇರಿ ನದಿ ಮಂಡ್ಯದ ಬಹಳಷ್ಟು ಭಾಗವನ್ನು ಹಸಿರಾಗಿಸಿರುವುದು ಇಲ್ಲಿಯೇ. ಕಾವೇರಿ ನದಿಯ ಉದ್ದಕ್ಕೂ

ಇರುವ ಶ್ರೀವೈಷ್ಣವರಿಗೆ ಪ್ರಮುಖ ದೇವಸ್ಥಾನಗಳಿರುವ ಆದಿರಂಗ, ಮಧ್ಯರಂಗ, ಅಂತ್ಯರಂಗಗಳಲ್ಲಿ ಮೊದಲಿನ ಎರಡು ರಂಗಗಳಿರುವುದು ಮಂಡ್ಯಜಿಲ್ಲೆಯಲ್ಲಿಯೇ.

ಮಂಡ್ಯಜಿಲ್ಲೆ ಕನ್ನಡ ಸಾಹಿತ್ಯಕ್ಕೆ ತನ್ನದೇ ಆದ ಕೊಡುಗೆ ನೀಡಿದೆ. ಶ್ರೀರಂಗಪಟ್ಟಣ ಇಂದು ಮಂಡ್ಯ ಜಿಲ್ಲೆಯ ತಾಲ್ಲೂಕು ಕೇಂದ್ರವಾಗಿದೆ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಒಡೆಯರ ಕಾಲದ ಸಾಹಿತ್ಯ ಎಂದು ಗುರುತಿಸಿಕೊಳ್ಳುವ ಸಾಹಿತ್ಯವೆಲ್ಲ ರಚಿತಗೊಂಡಿದ್ದು ಶ್ರೀರಂಗಪಟ್ಟಣದಲ್ಲಿಯೇ. ಅಂದಿನ ಚಿಕ್ಕದೇವರಾಜ ಒಡೆಯರ್, ಸಿಂಗಾರಾರ್ಯ, ಚಿಕುಪಾಧ್ಯಾಯ, ಸಂಚಿಹೊನ್ನಮ್ಮ ಮುಂತಾದವರನ್ನು ಮರೆಯಲಾಗುವುದಿಲ್ಲ. ೧೯ನೇ ಶತಮಾನದ ಕೊನೆಯ ಭಾಗದಿಂದ ಹಿಡಿದು೧೯೩೦ರ ವರೆಗಿನ ನವೋದಯ ಸಾಹಿತ್ಯದ ಆಧ್ಯಪ್ರವರ್ತಕರಾಗಿ ಕಾಣಿಸಿಕೊಳ್ಳುವ ಎಂ.ಎಲ್.ಶ್ರೀಕಂಠೇಗೌಡ, ಬಿ.ಎಂ.ಶ್ರೀ., ಎ.ಎನ್.ಮೂರ್ತಿರಾವ್, ರಾ.ನರಸಿಂಹಚಾರ್ಯ, ಎಸ್.ಜಿ.ನರಸಿಂಹಚಾರ್ಯ, ಪು.ತಿ.ನ., ಕೆ.ಎಸ್.ನರಸಿಂಹಸ್ವಾಮಿ, ಎಂ.ಆರ್.ಶ್ರೀನಿವಾಸಮೂರ್ತಿ, ನ.ಭದ್ರಯ್ಯ ಮುಂತಾದ ಗಣ್ಯರು ಈ ಜಿಲ್ಲೆಯವರು. ಸ್ವತಂತ್ರ್ಯಾನಂತರದಲ್ಲಿ ಪ್ರಸಿದ್ಧಗೊಂಡ ಡಾ.ಎಚ್.ಎಲ್.ನಾಗೇಗೌಡ, ಕೆ.ವಿ.ಶಂಕರಗೌಡ, ಡಾ.ಜೀ.ಶಂ.ಪ., ಪ್ರೊ.ರಾ.ಗೌ, ಪ್ರೊ.ಸು.ಜ.ನಾ, ಹ.ಕ.ರಾಜೇಗೌಡ, ಡಾ. ಬೆಸಗರಹಳ್ಳಿ ರಾಮಣ್ಣ, ಹುಲಕೆರೆರಮೇಶ, ಪ್ರೊ.ಡಿ.ಲಿಂಗಯ್ಯ, ಶ್ರೀಮತಿ ತ್ರಿವೇಣಿ, ಶ್ರೀಮತಿ ಆರ್ಯಾಂಬಪಟ್ಟಾಭಿ, ಶ್ರೀಮತಿ ಲತಾರಾಜಶೇಖರ್, ಕ್ಯಾತನಹಳ್ಳಿರಾಮಣ್ಣ, ಡಾ.ಸೋಮಶೇಖರಗೌಡ, ಡಾ.ಜಿ.ವಿ.ದಾಸೇಗೌಡ, ವ.ನಂ.ಶಿವರಾಮು, ಶಿವಳ್ಳಿಕೆಂಪೇಗೌಡ ಮುಂತಾದವರು ಸಾಹಿತ್ಯ ಕ್ಷೇತ್ರದಲ್ಲಿ ಕಂಗೊಳಿಸಿದ್ದಾರೆ.

ಮಂಡ್ಯ ಜಿಲ್ಲೆ ಭತ್ತದ ಕಣಜದಂತೆಯೇ ಜಾನಪದದ ಕಣಜವೂ ಆಗಿದೆ. ಕರ್ನಾಟಕದ ಶ್ರೇಷ್ಠ ಜಾನಪದ ವಿದ್ವಾಂಸರು ಮತ್ತು ಸಂಗ್ರಹಕಾರರು ಕಂಡುಬುರುವುದು ಈ ಜಿಲ್ಲೆಯಲ್ಲಿ. ಪ್ರಪ್ರಥಮ ಜಾನಪದ ಪ್ರಾಧ್ಯಾಪಕರೂ, ಜಾನಪದ ಕ್ಷೇತ್ರದಲ್ಲಿ ಅಂತರಾಷ್ಟ್ರೀಯ ಖ್ಯಾತಿಗಳಿಸಿರುವ ವಿದ್ವಾಂಸರೂ ಆದ ಡಾ.ಜೀ.ಶಂ.ಪರಮಶಿವಯ್ಯನವರು ಈ ಜಿಲ್ಲೆಯವರು. ಕರ್ನಾಟಕ ಜಾನಪದ ಪರಿಷತ್ತಿನ ಸಂಸ್ಥಾಪಕ ಅಧ್ಯಕ್ಷರೂ, ಜಾನಪದ ಅಕಾಡೆಮಿಯ ಮೊತ್ತ ಮೊದಲ ಅಧ್ಯಕ್ಷರೂ, ಭಾರತದಲ್ಲಿಯೇ ವಿಶಿಷ್ಟ ಹಾಗೂ ವಿನೂತನವಾದ 'ಜಾನಪದಲೋಕ' ನಿರ್ಮಾತೃವೂ ಆದ ಜಿಲ್ಲೆಯ ಮತ್ತೊಬ್ಬ ಜಾನಪದ ಧುರೀಣ ಎಚ್.ಎಲ್.ನಾಗೇಗೌಡರು ಪ್ರಮುಖರು.

ಈ ಜಿಲ್ಲೆಯ ಜಾನಪದ ಸಂಗ್ರಹ ೧೯೩೧ರಿಂದಲೇ ಆರಂಭವಾಗಿದ್ದು, ಮದ್ದೂರು ತಾಲ್ಲೂಕು ದೇಶಹಳ್ಳಿಯ ಎಂ.ಎಲ್.ಶ್ರೀಕಂಠೇಶಗೌಡರು ಆದ್ಯಸಂಗ್ರಹಕಾರರಾಗಿ ನಿಲ್ಲುತ್ತಾರೆ. ಅನಂತರ ಜಾನಪದವನ್ನು ವಿಶಾಲಅರ್ಥದಲ್ಲಿ ನೋಡಿದ ಅರ್ಚಕ ಬಿ.ರಂಗಸ್ವಾಮಿ. ನಾಗಮಂಗಲ ತಾಲ್ಲೂಕಿನ ಅಪಾರ ಜನಪದ ಗೀತ ಸಾಹಿತ್ಯವನ್ನು ಕಲೆಹಾಕಿದ ಕ.ರಾ.ಕೃ

ಆದಿಚುಂಚನಗಿರಿಯ ಶ್ರೀಚಂದ್ರಶೇಖರನಾಥಸ್ವಾಮಿಯವರು, ಡಿ.ಲಿಂಗಯ್ಯ, ಹ.ಕ.ರಾಜೇಗೌಡ, ಎಂ.ಎ.ಜಯಚಂದ್ರ (ಧವಳಶ್ರೀ), ರಾಗೌ, ಕ್ಯಾತನಹಳ್ಳಿರಾಮಣ್ಣ, ವ.ನಂ.ಶಿವರಾಮು, ಜಿ.ವಿ.ದಾಸೇಗೌಡ, ತ.ಚಿ.ಚಲುವೇಗೌಡ, ನಗುವನಹಳ್ಳಿ ಪಿ.ರತ್ನ, ಸುಶೀಲ ಹೊನ್ನೇಗೌಡ, ಜಯಲಕ್ಷ್ಮಿ ಸೀತಾಪುರ, ಬೋರೇಗೌಡ ಚಿಕ್ಕಮರಳಿ, ನರಸಿಂಹೇಗೌಡ ನಾರಣಪುರ ಜಾನಪದದ ಹಲವು ಮುಖಗಳ ಸಂಗ್ರಹ, ಅಧ್ಯಯನ ನಡೆಸುತ್ತಾ ಬಂದಿದ್ದಾರೆ. ನ.ಭದ್ರಯ್ಯ, ಬಿ.ನಿಂಗಮ್ಮ, ಕೆ.ಟಿ.ವೀರಪ್ಪ, ರಾಮದೇವನಹಳ್ಳಿ ರಾಮಯ್ಯ, ಸದಾಶಿವ ಎಣ್ಣೆಹೊಳೆ, ತೈಲೂರು ವೆಂಕಟಕೃಷ್ಣ, ಕಿಕ್ಕೇರಿ ನಾರಾಯಣ, ಕೆ.ಜೆ.ನಾರಾಯಣ ಮೊದಲಾದವರು ಜಿಲ್ಲೆಯ ಜಾನಪದ ಸಂಗ್ರಹಕಾರ್ಯ ನಡೆಸಿದ್ದಾರೆ.

ಕಲಾ ಪ್ರಪಂಚಲ್ಲಿ ಸಂಗೀತ, ನೃತ್ಯ, ಚಿತ್ರಕಲೆಗಳಿಗಿಂತ ಮಿಗಿಲಾಗಿ ರಂಗಭೂಮಿಯನ್ನು ಹೆಚ್ಚುಗಾರಿಕೆಯನ್ನಾಗಿಸಿಕೊಂಡಿದ್ದು ಈ ಜಿಲ್ಲೆಯ ವೈಶಿಷ್ಟ್ಯ. ಬೇಸಿಗೆ ಬಂತೆಂದರೆ ಇಡೀ ಜಿಲ್ಲೆಯ ಗ್ರಾಮೀಣ ಭಾಗಗಳಲ್ಲಿ ನಾಟಕ ಪ್ರದರ್ಶನಗಳು ವ್ಯಾಪಿಸಿಕೊಂಡು ಬಿಡುತ್ತವೆ. ಪ್ರತಿಯೊಂದು ಹಳ್ಳಿಯೂ ರಂಗಭೂಮಿಯಾಗಿ ಮಾರ್ಪಟ್ಟು ಸಾಮೂಹಿಕ ಪ್ರಕ್ರಿಯೆಗೆ ಕಾರಣವಾಗುವುದು ಈ ಜಿಲ್ಲೆಯ ವೈಶಿಷ್ಟ್ಯ. ಹೀಗಾಗಿ ಮಂಡ್ಯದ ನಾಟಕದ ಸೀನರಿಗಳು ಕರ್ನಾಟಕದ ಉದ್ದಗಲಕ್ಕಲ್ಲದೆ ಹೊರಗಿನ ತಮಿಳುನಾಡು, ಆಂಧ್ರಪ್ರದೇಶಗಳಲ್ಲೂ ವಿಜೃಂಭಿಸಿವೆ. ಸೀನರಿಗಳ ಇತಿಹಾಸವನ್ನು ಕೆದುಕುವಾಗ ಮಂಡ್ಯವನ್ನು ಹೊರತುಪಡಿಸಿ ದಾಖಲಿಸುವುದು ಸಾಧ್ಯವಿಲ್ಲವಾಗಿದೆ.

ವೃತ್ತಿನಾಟಕ ಕಂಪನಿಗಳು ಈ ಜಿಲ್ಲೆಯಲ್ಲಿ ಕಂಡುಬರದಿದ್ದರೂ, ವೃತ್ತಿನಾಟಕಗಳಿಗೆ ಅಪಾರವಾದ ಪ್ರೋತ್ಸಾಹವನ್ನು ಕೊಟ್ಟಿದ್ದಾರೆ. ವೃತ್ತಿನಾಟಕ ಕಂಪನಿಯ ದಿವಂಗತ ಯೋಗಾನರಸಿಂಹ ನಟರಾಗಿ, ಸಂಗೀತಗಾರರಾಗಿ, ನಿರ್ದೇಶಕರಾಗಿ, ನಾಟಕಕಾರರಾಗಿ ಹೆಸರು ಮಾಡಿದ್ದಾರೆ. ಒಂದು ಕಾಲದ ಪ್ರಸಿದ್ಧ ರಂಗಭೂಮಿ ಕಲಾವಿದೆ. ದಿವಂಗತ ಮಳವಳ್ಳಿ ಸುಂದರಮ್ಮ ಈ ಜಿಲ್ಲೆಯವರು. ಇವರ ತಂದೆ ಪಿಟೀಲು ಸುಬ್ಬಣ್ಣ ರಾಜಾಸ್ತಾನದ ಕಲಾವಿದರಾಗಿದ್ದರು. ಮಂಡ್ಯ ಜಿಲ್ಲೆ ಮಳವಳ್ಳಿಯವರಾದ ಬಿ.ಎಸ್.ರಾಜಯ್ಯಂಗಾರ್ ಒಂದು ಕಾಲಕ್ಕೆ ಕರ್ನಾಟಕ ಸಂಗೀತದ ಪ್ರಮುಖ ಹಾಡುಗಾರರಾಗಿ ಅದರಲ್ಲೂ 'ಹಾಡಿಸಿದಳೆಶೋಧೆ ಜಗದ್ದೋದ್ಧಾರನ' ಕೀರ್ತನೆಯನ್ನು ಹಾಡುವುದರ ಮೂಲಕ ನಾಡಿನೆಲ್ಲೆಡೆ ಪ್ರಸಿದ್ಧರಾಗಿದ್ದರು. ಇತ್ತೀಚಿನ ದಿನಗಳಲ್ಲಿ ಹವ್ಯಾಸಿ ರಂಗಭೂಮಿಯು ಇಲ್ಲಿ ಗಟ್ಟಿಯಾಗಿ ನೆಲೆಗೊಳ್ಳುತ್ತಿರುವುದು ಸಂತೋಷದ ವಿಷಯ.

ಕನ್ನಡಕ್ಕೆ ಮೊದಲ ವರ್ಣ ಚಿತ್ರ "ಅಮರಶಿಲ್ಪಿ ಜಕಣಾಚಾರಿ"ಯನ್ನು ಕೊಟ್ಟವರು ಬಿ.ಎಸ್.ರಂಗ. ನಾಗಮಂಗಲ ತಾಲ್ಲೂಕಿನ ಬಿಂಡಿಗನವಿಲೆಯ ಬಿ.ಎಸ್.ರಂಗ ಕನ್ನಡ ಚಿತ್ರರಂಗದಲ್ಲಿ ದೊಡ್ಡ ಹೆಸರು. ಕನ್ನಡ ಚಲನಚಿತ್ರ ಜಗತ್ತಿನ ಇತಿಹಾಸ ಬರೆಯುವಾಗ

ಬಿ.ಎಸ್.ರಂಗರವರನ್ನು ಮರೆಯುವಂತಿಲ್ಲ. ಇನ್ನೊಬ್ಬ ಹಿರಿಯರು ಕೆ.ವಿ.ಶಂಕರೇಗೌಡರು. ಮಂಡ್ಯ ಸಾಂಸ್ಕೃತಿಕ ಬದುಕಿನಲ್ಲಿ ಮುಖ್ಯ ಚೇತನವೆನಿಸಿದ ಗೌಡರು ''ಕೂಡಿಬಾಳೋಣ'' ಚಿತ್ರ ನಿರ್ಮಾಣದೊಂದಿಗೆ ಕಣಕ್ಕಿಳಿದರು. ರಾಜಕಾರಣದೊಂದಿಗ ಕಲಾಭಿರುಚಿಯನ್ನು ಸರಿದೂಗಿಸಿದ ಶಂಕರೇಗೌಡರು ಲೇಖಕರೂ ಹೌದು. ಅವರ ಮಗ ಕೆ.ಎಸ್.ಸಚ್ಚಿದಾನಂದ ತಂದೆಯವರ ಹಾದಿಯಲ್ಲಿ ಮುಂದುವರಿದು ಮುತ್ತು ಒಂದು ಮುತ್ತು, ಮರೆಯದ ಹಾಡು, ಹೊಸನೀರು, ಸಂಕ್ರಾಂತಿಯಂಥ ಗಂಭೀರ ಚಿತ್ರಗಳನ್ನು ನಿರ್ಮಿಸಿದವರು. ರಾಜ್ಯ ಪ್ರಶಸ್ತಿಯನ್ನು ಪಡೆದವರು.

೧೯೬೯ರಲ್ಲಿ ಚಿತ್ರರಂಗಕ್ಕೆ ಕಾಲಿಟ್ಟ ಮತ್ತೊಬ್ಬ ಪ್ರತಿಭಾಶಾಲಿ ಕೆ.ವಿ.ಜಯರಾಂ, ನಾಗಮಂಗಲ ತಾಲ್ಲೂಕಿನ ಎಲೆಕೊಪ್ಪದ ಜಯರಾಂ ತಮ್ಮ ವೃತ್ತಿಜೀವನ ಆರಂಭಿಸಿದ್ದು ಸಂಕಲನಸಹಾಯಕರಾಗಿ, ಅನಂತರ ಸಹನಿರ್ದೇಶಕ ಇದೀಗ ೫ ಚಿತ್ರಗಳ ನಿರ್ಮಾಪಕ ಹಾಗೂ ೧೫ ಚಿತ್ರಗಳನ್ನು ನಿರ್ದೇಶಿಸಿ, ಶ್ವೇತಗುಲಾಬಿ, ಬಾಡದಹೂ, ಹೊಸನೀರು, ಅರುಣರಾಗ ಚಿತ್ರಗಳಿಗೆ ರಾಜ್ಯಪ್ರಶಸ್ತಿ ಪಡೆದಿದ್ದಾರೆ. ಜಯರಾಂ ರವರದು ಕ್ರಿಯಾಶೀಲ ವ್ಯಕ್ತಿತ್ವ. ಇವರ ಸಹೋದರ ಕೆ.ವಿ.ರಾಜು ಅಣ್ಣ ಜಯರಾಂನ ಚಿತ್ರಕ್ಕೆ ಸಂಭಾಷಣೆ, ರಚನೆ, ಸಹನಿರ್ದೇಶನ ಮಾಡುತ್ತಾ ಕ್ರಮೇಣ ಸ್ವತಂತ್ರ ನಿರ್ದೇಶಕರಾಗಿ ಬೆಳೆದವರು.

'ಒಂದು ಪ್ರೇಮದ ಕಥೆ' ಎಂಬ ಕಪ್ಪು ಬಿಳುಪಿನ ಕಲಾತ್ಮಕ ಚಿತ್ರದಿಂದ ಹೊರಟ ಜೋಸೈಮನ್ ಕೂಡ ಮಂಡ್ಯದವರೇ, ಹಾಗೆ ಕೋಡಿಹಳ್ಳಿ ಶಿವರಾಂ, ಗೌಡಗೆರೆಯ ಶಿವರಾಂ, ಡಿ.ಎಚ್.ಗೌಡ, ನಾಗತಿಹಳ್ಳಿ ಚಂದ್ರಶೇಖರ್, ಬೆಸಗರಹಳ್ಳಿ ಪ್ರೇಮ್ ಇದೀಗ ನಿರ್ಮಾಣಕ್ಕಿಳಿಯುತ್ತಿರುವ ಎಸ್.ಆರ್.ಕೇಶವ ಹಾಗೂ ನಾಗಮಂಗಲದ ಶ್ರೀಕಂಠಮೂರ್ತಿ ನಿರ್ಮಾಪಕರ ಗುಂಪಿಗೆ ಸೇರುವ ಹೊಸ ಸದಸ್ಯರು.

ಸೂಪರ್‌ಸ್ಟಾರ್ ಅಂಬರೀಶ್, ಖಳಪಾತ್ರದ ಅರವಿಂದ್, ಶನಿಮಹಾದೇವಪ್ಪ, ದಿವಂಗತ ರಮೇಶ್, ಹಾಸ್ಯನಟ ಕಿಟ್ಟಿ, ಮಂಡ್ಯರಮೇಶ್ ಹಾಗೆ ತಾರೆಯರಲ್ಲಿ ವೈಜಯಂತಿಮಾಲ ಪ್ರಸಿದ್ಧರು. ನಿರ್ಮಾಣ, ನಿರ್ದೇಶನಗಳಲ್ಲದೆ ತೆರೆ ಹಿಂದಿನ ತಂತ್ರಜ್ಞರಾಗಿ ದುಡಿದ ದುಡಿಯುತ್ತಿರುವ ಹಲವಾರು ಪ್ರತಿಭಾಶಾಲಿಗಳನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ. ಮಂಡ್ಯದ ಹವ್ಯಾಸಿರಂಗಭೂಮಿಯ ಚೇತರಿಕೆಯ ಕಾರಣದಿಂದಾಗಿ ಮೂಡಿಬಂದ ಅನೇಕ ಪ್ರತಿಭಾಶಾಲಿ ಯುವಕರು ಇಂದು ಕಿರುತೆರೆಯಲ್ಲಿ ಹಾಗೂ ಸಿನಿಮಾಗಳಲ್ಲಿ ಗಮನ ಸೆಳೆದಿರುವುದು ಮಂಡ್ಯ ಜಿಲ್ಲೆಯ ಒಂದು ವೈಶಿಷ್ಟವೇ ಆಗಿದೆ.

ಸಂಗೀತ ಮತ್ತು ನೃತ್ಯ ಕ್ಷೇತ್ರಗಳಲ್ಲಿ ಹೆಚ್ಚು ಕೆಲಸವಾಗಿಲ್ಲವಾದರೂ ನೃತ್ಯಕ್ಷೇತ್ರದಲ್ಲಿ ಮಾತ್ರ. ಇತ್ತೀಚೆಗೆ ಅಪಾರವಾದ ಪ್ರಯತ್ನಗಳಾಗುತ್ತಿವೆ. ಆದರೆ ಶೈಶವಾವಸ್ಥೆಯಲ್ಲಿರುವ ಸಂಗೀತ ಕ್ಷೇತ್ರವನ್ನು ಮತ್ತಷ್ಟು ಗಟ್ಟಿಗೊಳಿಸಬೇಕಾಗಿದೆ.

ಕ್ರೀಡಾ ಕ್ಷೇತ್ರದಲ್ಲಿ ಕೇವಲ ಕಬಡ್ಡಿ, ವಾಲಿಬಾಲ್, ಪುಟ್ಬಾಲ್ ಕ್ಷೇತ್ರಗಳ ಬಗ್ಗೆ ಬಹಳವಾದ ಆಸಕ್ತಿ ಇದ್ದಂತೆ ಕಂಡುಬರುತ್ತದೆ. ಅದರಲ್ಲೂ ಸ್ವಾತಂತ್ರ್ಯಾನಂತರದಲ್ಲಿ ಕಳೆದ ದಶಕದವರೆಗೆ ಕಬಡ್ಡಿ ಅಗ್ರಸ್ಥಾನದಲ್ಲಿತ್ತು. ರಾಜ್ಯ ಮತ್ತು ರಾಷ್ಟ್ರ ಮಟ್ಟದ ಆಟಗಾರರಾಗಿ ಇಲ್ಲಿಯ ಕೆಲವು ಯುವಕರು ಮಿಂಚಿದ್ದಾರೆ. ಖೋ, ಖೋ, ವಾಲಿಬಾಲ್, ಫುಟ್‌ಬಾಲ್ ಮತ್ತು ಅಥ್ಲೆಟಿಕ್ ಕ್ಷೇತ್ರದಲ್ಲಿ ಅಲ್ಲಲ್ಲಿ ಕೆಲವು ಆಟಗಾರರು ಗುರುತಿಸಲ್ಪಟ್ಟಿದ್ದಾರೆ. ಆದರೆ ಇತ್ತೀಚಿನ ದಿನಗಳಲ್ಲಿ ಕ್ರೀಡಾ ಕ್ಷೇತ್ರದ ಎಲ್ಲಾ ವಿಭಾಗಗಳಲ್ಲೂ ಆಶಾದಾಯಕವಾದ ಬೆಳವಣಿಗೆ ಕಂಡುಬರುತ್ತಿವೆ.

ಕೈಗಾರಿಕಾ ಕ್ಷೇತ್ರವನ್ನು ನೋಡುವಾಗ ಮಂಡ್ಯ ಜಿಲ್ಲೆ ಸ್ವತಂತ್ರವಾಗಿ ರೂಪುಗೊಮಡ ನಂತರ, ರೈತರ ಜೀವನಾಡಿಯಾಗಿ ೧೯೪೦ರ ದಶಕದಲ್ಲಿ ಮಂಡ್ಯ ನಗರದಲ್ಲಿ ಎದ್ದು ನಿಂತ "ಮಂಡ್ಯ ಸಕ್ಕರೆ ಕಾರ್ಖಾನೆ" ಜಿಲ್ಲೆಯ ಪ್ರಥಮ ಅಧಿಕೃತ ಕೈಗಾರಿಕೆ ಎನ್ನಬಹುದು. ನಂತರ ಮಂಡ್ಯ ಜಿಲ್ಲೆಯ ಪಾಂಡವಪುರದಲ್ಲಿ ಸಹಕಾರಿ ತತ್ವದ ತಳಹದಿ ಮೇಲೆ ಪ್ರಾರಂಭವಾದ ಪಾಂಡವಪುರ ಸಕ್ಕರೆ ಕಾರ್ಖಾನೆ, ೭೦ರ ದಶಕದಲ್ಲಿ ಮದ್ದೂರಿನ ಸೋಮನಹಳ್ಳಿ ಕೈಗಾರಿಕಾ ಪ್ರದೇಶದಲ್ಲಿ ಪ್ರಾರಂಭವಾದ ಕರ್ನಾಟಕ ಸ್ಕೂಟರ್ ಕಾರ್ಖಾನೆ (ಈಗ ಇದು ಬಿ.ಪಿ.ಎಲ್. ಉತ್ಪಾದನಾ ಘಟಕವಾಗಿ ಪರಿವರ್ತನೆಗೊಂಡಿದೆ) ಮಂಡ್ಯದ ಶ್ರೀನಿವಾಸಪುರ ಗೇಟ್ ಬಳಿ ಪ್ರಾರಂಭವಾದ ಅಸಿಟೇಜ್ ಕಾರ್ಖಾನೆ (ಈಗ ಇದು ಮುಚ್ಚಿದೆ), ಬೆಳಗೊಳ ಬಳಿ ಕೇಂದ್ರ ಸರ್ಕಾರದ ಸ್ವಾಮ್ಯದ ಪೇಪರ್ ಮಿಲ್ (ಇದೂ ಸಹ ಮುಚ್ಚಲ್ಪಟ್ಟಿದೆ), ಕಾಳಮುದ್ದನದೊಡ್ಡಿ, (ಕೆ.ಎಂ.ದೊಡ್ಡಿ) ಬಳಿ ಪ್ರಾರಂಭವಾದ ಚಾಮುಂಡೇಶ್ವರಿ ಷುಗರ್ಸ್ ಇವೆಲ್ಲಾ ಜಿಲ್ಲೆಯ ಬೃಹತ್ ಕೈಗಾರಿಕೆಗಳಾಗಿವೆ. ಇವುಗಳ ಜೊತೆ ಇತ್ತಿಚೆಗೆ ಪ್ರಾರಂಭವಾದ ಖಾಸಗಿರಂಗದ ಕೊಪ್ಪ ಗ್ರಾಮದ ಎಸ್.ಸಿ.ಮಲ್ಲಯ್ಯ ಷುಗರ್ಸ್ ಕೆ.ಆರ್.ಪೇಟೆಯ ಸಕ್ಕರೆ ಕಾರ್ಖಾನೆ, ಶ್ರಿರಂಗಪಟ್ಟಣದ ಬಳಿ ಅಕ್ಕಿ ತೌಡಿನಿಂದ ಎಣ್ಣೆ ತೆಗೆಯುವ ಕೈಗಾರಿಕಾ ಘಟಕ, ಸೋಮನಹಳ್ಳಿಯಲ್ಲಿರುವ ಚರಕ ಫಾರ್ಮಾನುಟಿಕಲ್ಸ್ ಹಾಗೂ ಅನೇಕ ಗ್ರಾನೈಟ್ ಉದ್ದಿಮೆಗಳು ನೂರಾರು ಮಂದಿಗೆ ಉದ್ಯೋಗ ಸೃಷ್ಟಿಸಿವೆ.

ಇನ್ನು ಪತ್ರಿಕೋದ್ಯಮದಲ್ಲಿ ಅಂತಹ ಹೇಳಿಕೊಳ್ಳುವ ಪ್ರಯತ್ನಗಳು ಹಿಂದೆ ಆಗಿಲ್ಲವಾದರೂ ಇತ್ತೀಚಿನ ದಿನಗಳಲ್ಲಿ ಪತ್ರಿಕೋದ್ಯಮ ಕ್ಷೇತ್ರಗಳಲ್ಲಿ ಈ ಜಿಲ್ಲೆಯ ಹಲವಾರುಜನ ಪ್ರಯತ್ನಶೀಲರಾಗುತ್ತಿರುವುದು ಸಂತಸದ ವಿಷಯ.

ಸ್ವಾತಂತ್ರ್ಯ ಹೋರಾಟಕ್ಕೆ ಮಂಡ್ಯಜಿಲ್ಲೆಯದು ಒಂದು ಕೊಡುಗೆ. ಮೈಸೂರು ಕಾಂಗ್ರೆಸ್‌ನ ಉದಯ, ಶಿವಪುರ, ಧ್ವಜಸತ್ಯಾಗ್ರಹದಲ್ಲಿ ಪ್ರಮುಖ ಪಾತ್ರ ವಹಿಸಿದ ಸಹುಕಾರ್ ಚನ್ನಯ್ಯ, ಇಂಡುವಾಳು ಹೆಚ್. ಹೊನ್ನಯ್ಯ, ಹೆಚ್.ಕೆ.ವೀರಣ್ಣಗೌಡ ಮುಂತಾದವರು ಈ ಜಿಲ್ಲೆಯವರೇ. ಸ್ವಾತಂತ್ರ್ಯಾ ನಂತರದ ರಾಜಕೀಯದಲ್ಲಿ ಮಂಡ್ಯವನ್ನು

ತುಂಬ ಎತ್ತರಕ್ಕೆ ತೆಗೆದುಕೊಂಡು ಹೋದ ಕೆ.ವಿ.ಶಂಕರಗೌಡ, ಹೆಚ್.ಕೆ.ವೀರಣ್ಣಗೌಡ, ಕೆ.ಸಿಂಗಾರಿಗೌಡ, ಎಸ್.ಎಂ.ಕೃಷ್ಣ, ಜಿ.ಮಾದೇಗೌಡ ಮುಂತಾದವರು ಈ ಜಿಲ್ಲೆಯವರೇ, ಇತ್ತೀಚಿನ ರಾಜಕಾರಣದಲ್ಲಿ ಹೆಸರು ಮಾಡಿದ ಎಸ್.ಡಿ.ಜಯರಾಂ, ಕೆ.ಎನ್.ನಾಗೇಗೌಡ, ಚಲುವರಾಯಸ್ವಾಮಿ, ಹೆಚ್.ಟಿ.ಕೃಷ್ಣಪ್ಪ, ಅಂಬರೀಷ್, ಪುಟ್ಟಣ್ಣಯ್ಯ, ಕೆ.ಆರ್.ಪೇಟೆ ಕೃಷ್ಣ ಮುಂತಾದವರು ಈ ಜಿಲ್ಲೆಯವರೇ.

ಅಚ್ಚಗನ್ನಡದ ನೆಲೆಬೀಡಾದ ಈ ಜಿಲ್ಲೆಯಲ್ಲಿ ಧಾರ್ಮಿಕ ಸಾಮರಸ್ಯಕ್ಕೆ, ಕೋಮುಸೌಹಾರ್ಧತೆಗೆ ಯಾವುದೇ ಕೊರತೆಯಿಲ್ಲ. ಭಾಷಾ ಸಮಸ್ಯೆಯಾಗಲೀ, ದಲಿತ ಸಂಘರ್ಷವಾಗಲಿ ಈ ಜಿಲ್ಲೆಯಲ್ಲಿ ಕಂಡು ಬರುವುದಿಲ್ಲ. ಸಹಬಾಳ್ವೆಗೆ ಹೆಸರಾಗಿರುವ ಈ ಜಿಲ್ಲೆಯ ಜನ ಮೇಲ್ನೋಟಕ್ಕೆ ಸ್ವಲ್ಪ ಒರಟರಂತೆ ಕಂಡರೂ, ನೇರ ನಡವಳಿಕೆ, ನಿಷ್ಠೂರ ಮಾತಿಗೆ ಹೆಸರಾಗಿರುವ ಈ ಜಿಲ್ಲೆಯ ಜನ ಹೃದಯ ಶ್ರೀಮಂತಿಕೆಗೆ ಹೆಸರಾಗಿದ್ದಾರೆ.

ಒಂದು ಕಾಲದಲ್ಲಿ ಮೈಸೂರು ಜಿಲ್ಲೆಗೆ ಸೇರಿದ್ದ ಈ ಪ್ರದೇಶವು ೧-೦೭-೧೯೩೯ರಂದು ಸ್ವತಂತ್ರ ಮಂಡ್ಯ ಜಿಲ್ಲೆಯಾಗಿ ಅಸ್ತಿತ್ವಕ್ಕೆ ಬಂದಿತು. ಈ ಜಿಲ್ಲೆಯಲ್ಲಿ ಒಟ್ಟು ೭ ತಾಲ್ಲೂಕುಗಳಿವೆ. ಅವುಗಳೆಂದರೆ, ಕೃಷ್ಣರಾಜಪೇಟೆ, ನಾಗಮಂಗಲ, ಪಾಂಡವಪುರ, ಶ್ರೀರಂಗಪಟ್ಟಣ, ಮಳವಳ್ಳಿ, ಮದ್ದೂರು ಮತ್ತು ಮಂಡ್ಯ. ಈ ಜಿಲ್ಲೆಯಲ್ಲಿ ೧೧ ಪಟ್ಟಣಗಳು, ೩೧ ಹೋಬಳಿಗಳು, ೧೧೦೪ ಪಂಚಾಯತ್‌ಗಳು, ೧೩೫೪ ಗ್ರಾಮಗಳೂ ಇವೆ. ೨೦೦೧ರ ಜನಗಣತಿಯ ಪ್ರಕಾರ ೧೭.೬೧ಲಕ್ಷ. ಒಟ್ಟು ಜನಸಂಖ್ಯೆಯಲ್ಲಿ ೮.೮೭ಲಕ್ಷ ಗಂಡಸರು ಮತ್ತು ೮.೭೪ ಲಕ್ಷ ಹೆಂಗಸರು ಇದ್ದಾರೆ. ಜನಸಾಂದ್ರತೆ ಪ್ರತಿ ಚ.ಕಿ.ಮೀ.ಗೆ ೩೫೫.

ಕೃಷ್ಣರಾಜಪೇಟೆ ಎಂದು ಇಂದು ಪ್ರಸಿದ್ಧಿಯಾಗಿರುವ ತಾಲ್ಲೂಕು ಕೇಂದ್ರ ಹಿಂದೆ ಅಂದರೆ ೧೯೮೧ರ ರವೆಗೆ 'ಅತ್ತಿಗುಪ್ಪೆ' ಎಂದು ಕರೆಯಲ್ಪಡುತ್ತಿತ್ತು. ಇಂದು ಕೆಲವು ಹಳೆಯ ಹಿರಿಯ ತಲೆಮಾರಿನ ವ್ಯಕ್ತಿಗಳೂ, ಗ್ರಾಮೀಣ ಪ್ರದೇಶದ ಜನರು ಅತ್ತಿಗುಪ್ಪೆ ಎಂದೆ ಕರೆಯುತ್ತಾರೆ. ಇದಕ್ಕೆ ಕಾರಣವೇನೆಂದರೆ ಹಿಂದೆ ಹತ್ತಿಯನ್ನು ಉತ್ತರಕರ್ನಾಟಕದಿಂದ ಬಂಡಿಗಳಲ್ಲಿ ಹಳೆಯ ಮೈಸೂರು ಭಾಗಕ್ಕೆ ಸಾಗಾಣೆ ಮಾಡುತ್ತಿದ್ದರಂತೆ. ಹತ್ತಿಯನ್ನು ಹೊತ್ತ ಎತ್ತಿನಗಾಡಿಗಳು ಇಂದಿನ ಕೆ.ಆರ್.ಪೇಟೆಯಲ್ಲಿ ಬೀಡುಬಿಡುತ್ತಿದ್ದವಂತೆ. ಅದು ನೋಡುಗರ ಕಣ್ಣಿಗೆ ಗಾಡಿಯ ಮೇಲಿನ ಹತ್ತಿಕುಪ್ಪೆ, ಕುಪ್ಪೆಯಾಗಿ ಕಾಣುತ್ತಿತ್ತಂತೆ. ಅದರಿಂದ ಇದನ್ನು 'ಹತ್ತಿಗುಪ್ಪೆ' ಎಂದು ಕರೆಯಲಾಯಿತು. ಅದು ಕಾಲಾನಂತರದಲ್ಲಿ ಜನರ ಬಾಯಲ್ಲಿ 'ಅತ್ತಿಗುಪ್ಪೆ'ಯಾಗಿ ಉಳಿಯಿತು.

ಮುಂದೆ ನಾಲ್ವಡಿ ಕೃಷ್ಣರಾಜ ಒಡೆಯರು ಅತ್ತಿಗುಪ್ಪೆಗೆ ಭೇಟಿಯಿತ್ತಾಗ ಅಲ್ಲಿನ ಜನ, ಅತ್ತಿಗುಪ್ಪೆಯಿಂದ ನಾಗಮಂಗಲಕ್ಕೆ ಸರಿಯಾದ ರಸ್ತೆಯಿಲ್ಲದೆ ತೊಂದರೆಯಾಗಿದೆಯೆಂದೂ,

ಹೊಸದೊಂದು ರಸ್ತೆಯ ನಿರ್ಮಾಣ ಕೋರಿ ಅಹವಾಲು ಸಲ್ಲಿಸಿದರು. ಮಹಾರಾಜರು ಸಂಬಂಧಪಟ್ಟ ಅಧಿಕಾರಿಗೆ ರಸ್ತೆ ನಿರ್ಮಾಣಕ್ಕೆ ಆದೇಶವಿತ್ತರು. ಆದರೆ ಸಂಬಂಧಪಟ್ಟಅಧಿಕಾರಿ ಅತ್ತ ಗಮನಕೊಡದೆ ಹೋದದ್ದು, ಈ ವಿಷಯ ತಿಳಿದ ಕೃಷ್ಣರಾಜ ಒಡೆಯರು ಆ ಅಧಿಕಾರಿಯಿಂದಲೇ ಮತ್ತೆ ರಸ್ತೆ ನಿರ್ಮಾಣ ಮಾಡಿಸಿ, ತಾವೇ ಅಲ್ಲಿ ಪ್ರಯಾಣ ಮಾಡಿದರಂತೆ. ಹೀಗೆ ಅವರ ಭೇಟಿಯ ಕಾರಣದಿಂದಲೆ ಅದು ಮುಂದೆ 'ಕೃಷ್ಣರಾಜಪೇಟೆ'ಯಾಯಿತು ಎಂಬ ಕಥೆಯಿದೆ. ಈಗ ಈ ಕೃಷ್ಣರಾಜಪೇಟೆ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ 'ಕೆ.ಆರ್.ಪೇಟೆ' ಎಂಬ ಸಂಕ್ಷಿಪ್ತ ನಾಮದಿಂದ ಪ್ರಚಲಿತವಾಗಿದೆ.

ಕೃಷ್ಣರಾಜಪೇಟೆ ಕರ್ನಾಟಕ ರಾಜ್ಯದ ಮಂಡ್ಯ ಜಿಲ್ಲೆಯ ಪಶ್ಚಿಮ ಭಾಗದಲ್ಲಿರುವ ತಾಲ್ಲೂಕು ಕೇಂದ್ರಸ್ಥಳ. ಮಂಡ್ಯ ಜಿಲ್ಲೆಯ ಏಳು ತಾಲ್ಲೂಕುಗಳಲ್ಲಿ ದೊಡ್ಡ ತಾಲ್ಲೂಕು. ಕೆ.ಆರ್.ಪೇಟೆ ತಾಲ್ಲೂಕು ಈಶಾನ್ಯ, ಪೂರ್ವ ಮತ್ತು ಆಗ್ನೇಯ ದಿಕ್ಕಿನಲ್ಲಿ ನಾಗಮಂಗಲ ಮತ್ತು ಪಾಂಡವಪುರ ತಾಲ್ಲೂಕುಗಳೂ, ದಕ್ಷಿಣ ಮತ್ತು ನೈಋತ್ಯದಲ್ಲಿ ಮೈಸೂರು ಜಿಲ್ಲೆಯೂ, ಉತ್ತರ ಮತ್ತು ವಾಯವ್ಯ ದಿಕ್ಕಿನಲ್ಲಿ ಹಾಸನ ಜಿಲ್ಲೆಯೂ ಈ ತಾಲ್ಲೂಕನ್ನು ಸುತ್ತುವರೆದಿದೆ. ತಾಲ್ಲೂಕಿನ ವಿಸ್ತೀರ್ಣ ೯೦೬.೩ ಚದರ ಕಿ.ಮೀ.ಗಳು.

ಕೃಷ್ಣರಾಜಪೇಟೆಗೆ ಕೆ.ಆರ್.ಪೇಟೆ ಎಂಬುದು ಸಂಕ್ಷಿಪ್ತ ನಾಮವಾಗಿದ್ದು, ಮಂಡ್ಯದಿಂದ ೬೦ ಕಿ.ಮೀ. ಪಾಂಡವಪುರ ರೈಲ್ವೆ ನಿಲ್ದಾಣದಿಂದ ೩೩ ಕಿ.ಮೀ. ಮೈಸೂರಿನಿಂದ ೫೭ ಕಿ.ಮೀ. ದೂರದಲ್ಲಿದೆ.

ಕೆ.ಆರ್.ಪೇಟೆ ತಾಲ್ಲೂಕಿನಲ್ಲಿರುವ ಬೆಟ್ಟಗುಡ್ಡಗಳಲ್ಲಿ ಹೇಮಗಿರಿ, ಬೆಳ್ಳಿಬೆಟ್ಟ, ಚೆನ್ನಗಿರಿ ಮತ್ತು ಜೆಲ್ಲಿಬೆಟ್ಟ, ಗವಿಬೆಟ್ಟ, ನಾರಾಯಣದುರ್ಗ ಎಂಬುವು ಪ್ರಮುಖ ಬೆಟ್ಟಗಳಾಗಿವೆ. ಜೆಲ್ಲಿಬೆಟ್ಟ ಕೃಷ್ಣರಾಜಪೇಟೆಗೆ ಸುಮಾರು ಐದು ಕಿ.ಮೀ.ದೂರದಲ್ಲಿದೆ. ಇಲ್ಲಿ ಬೆಣಚುಕಲ್ಲು ಮತ್ತು ಬೂದುಬಣ್ಣದ ಶಿಲೆಗಳು, ಕೆಂಪು ಶಿಲೆಗಳು ದೊರೆಯುತ್ತವೆ.

ಬೆಳ್ಳಿಬೆಟ್ಟ ಮತ್ತು ಹೇಮಗಿರಿಗಳಲ್ಲಿ ಮೈಕಾ, ಬೆಳ್ಳಿಹಾಗೂ ಚಿನ್ನದ ಅದಿರು ದೊರೆಯುವುದೆಂದು ೧೮೮೬ರ ಸಂಶೋಧನಾ ಸಮೀಕ್ಷೆಯಿಂದ ತಿಳಿದುಬಂದಿದೆ. ಬೆಳ್ಳಿ ಬೆಟ್ಟ ೨೫ ಕಿ.ಮೀ. ದೂರದವರೆಗೆ ೫ ಕಿ.ಮೀ. ಅಗಲವಾಗಿ ಹೇಮಾವತಿ ನದಿ ತೀರಕ್ಕೆ ಹೊಂದಿಕೊಂಡಂತೆ ಕಾವೇರಿನದಿ ತೀರದವರೆಗೆ ಹರಡಿಕೊಂಡಿದೆ. ಶೀಳನೆರೆ ಬಳಿ ಕ್ರೋಮೈಟ್, ನೈಸ್‌ಶಿಲೆ ಮುಂತಾದ ಖನಿಜ ನಿಕ್ಷೇಪಗಳು ದೊರೆಯುತ್ತವೆ ಎನ್ನಲಾಗಿದೆ. ಹಾದರೂನು ಮತ್ತು ಬೆಳ್ಳಿಬೆಟ್ಟಗಳ ಶ್ರೇಣಿಯಲ್ಲಿ ಕಲ್ನಾರು ದೊರೆಯುತ್ತದೆ. ಶಿಲ್ಪಕಲ್ಲುಗಳು ಹೆಚ್ಚು ಅಗಲವಿಲ್ಲದ ಪಟ್ಟೆಗಳು ಉದ್ದುದ್ದವಾಗಿ ತಾಲ್ಲೂಕಿನ ಕೆಲವೆಡೆ ಪಸರಿಸಿವೆ. ಇವುಗಳಲ್ಲಿ ಬೆಳ್ಳಿಬೆಟ್ಟದ ಹಾದನೂರುಪಟ್ಟೆ, ಕೇ.ಆರ್.ಪೇಟೆ ಮತ್ತು ಚಿನಕುರುಳಿಗಳ ಮಧ್ಯದಲ್ಲಿರುವ ಪಟ್ಟೆಗಳು ಪ್ರಮುಖವಾದವುಗಳು. ಕೆ.ಆರ್.ಪೇಟೆ ಸಮುದ್ರ ಮಟ್ಟದಿಂದ

ಸುಮಾರು ೭೫೦ ರಿಂದ ೯೦೦ ಮೀಟರ್ ಎತ್ತರದಲ್ಲಿದೆ ಅಥವಾ ಸಮುದ್ರ ಮಟ್ಟದಿಂದ ಸುಮಾರು ೨೫೦೦-೩೦೦೦ ಅಡಿಗಳಷ್ಟು ಎತ್ತರದಲ್ಲಿದೆ.

ಕೃಷ್ಣರಾಜಪೇಟೆ ತಾಲ್ಲೂಕಿಗೆ ಮುಂಗಾರು ಮತ್ತು ಹಿಂಗಾರು ಮಾರುತಗಳಿಂದ ಮಳೆಯಾಗುತ್ತದೆ. ನೈರುತ್ಯ ಮಾರುತಗಳು ಏಪ್ರಿಲ್ ತಿಂಗಳಿಂದ ನವೆಂಬರ್ ತಿಂಗಳವರೆಗೆ ಮಳೆ ಸುರಿಸುತ್ತವೆ. ಮಾರ್ಚ ಮತ್ತು ಮೇ ತಿಂಗಳಲ್ಲಿ ಉಷ್ಣತೆ ಅಧಿಕವಾಗಿರುತ್ತದೆ. ಅಕ್ಟೋಬರ್ ತಿಂಗಳಲ್ಲಿ ಮಳೆಯು ಅಧಿಕವಾಗಿ ಆಗುತ್ತದೆ. ತಾಲ್ಲೂಕಿನ ೩ ವೃಷ್ಠಿಮಾಪಕ ಕೇಂದ್ರಗಳಿವೆ.

ಈ ತಾಲ್ಲೂಕಿನಲ್ಲಿ ಸುಮಾರು ೪೯ ದಿನಗಳು ಮಳೆಯ ದಿನಗಳೆಂದು ಗುರುತಿಸಲಾಗಿದೆ. ಸುಮಾರು ೭೪೨.೦ ಮಿ.ಮೀಗಳಷ್ಟು ಮಳೆಯು ಬೀಳಬೇಕು. ವಾಸ್ತವವಾಗಿ ಮಳೆ ೪೬೬,೮ ಮಿ.ಮೀ.ಗಳಷ್ಟು ಆಗುತ್ತಿದೆ. ೨.೫ ಮಿ.ಮೀ.ಗಳಿಗಿಂತ ಹೆಚ್ಚಿನ ಮಳೆಯ ದಿನಗಳನ್ನು ಹಾಗೂ ಸರಾಸರಿ ಮಳೆಯ ಪ್ರಮಾಣವನ್ನು ಈ ಕೆಳಗಿನ ಪಟ್ಟಿಯಲ್ಲಿ ನೋಡಬಹುದು.

| ತಿಂಗಳು | ಸರಾಸರಿ ಮಳೆಯ ಪ್ರಮಾಣ | ಮಳೆಯ ದಿನಗಳು |
|---|---|---|
| ಜನವರಿ | ೩.೬ | ೦.೩ |
| ಫೆಬ್ರವರಿ | ೫.೮ | ೦.೫ |
| ಮಾರ್ಚ್ | ೮.೧ | ೦.೭ |
| ಏಪ್ರಿಲ್ | ೪೭.೦ | ೩.೭ |
| ಮೇ | ೧೪೦.೫ | ೮.೦ |
| ಜೂನ್ | ೪೭.೦ | ೪.೫ |
| ಜುಲೈ | ೬೪.೩ | ೬.೦ |
| ಆಗಸ್ಟ್ | ೬೪.೮ | ೫.೨ |
| ಸೆಪ್ಟೆಂಬರ್ | ೧೦೦.೩ | ೬.೦ |
| ಅಕ್ಟೋಬರ್ | ೧೬೦.೮ | ೮.೮ |
| ನವೆಂಬರ್ | ೭೪.೪ | ೪.೩ |
| ಡಿಸೆಂಬರ್ | ೧೧.೪ | ೦.೭ |

ಕೃಷ್ಣರಾಜಪೇಟೆ ತಾಲ್ಲೂಕಿನಲ್ಲಿ ಮರಳು ಮಿಶ್ರಿತ ಕೆಂಪು ಮಣ್ಣಿನ ಪ್ರದೇಶ ಹೆಚ್ಚು. ಕೆಲವು ಕಡೆ ಜೇಡಿಮಣ್ಣಿನ ನೆಲವಿದೆ. ಹೆಚ್ಚಿನ ಪ್ರದೇಶ ಬಂಜರು ನೆಲ. ಈ ತಾಲ್ಲೂಕಿನಲ್ಲಿ ೪.೭೬೭ ಹೆಕ್ಟೇರು ಅರಣ್ಯ ಪ್ರದೇಶವಿದೆ. ಮೊದೆ ಅಥವಾ ಕುರುಚಲು ಗಿಡಗಳಿಂದ ಕೂಡಿದ

ಕಾಡುಗಳು ಅಲ್ಲಲ್ಲಿ ಕಂಡುಬರುತ್ತವೆ. ಮೊದಲು ಶ್ರೀಗಂಧ ಅಧಿಕವಾಗಿದ್ದು ಇತ್ತೀಚಿನ ದಿನಗಳಲ್ಲಿ ಕ್ಷೀಣಿಸುತ್ತಾ ಬಂದಿದೆ.

ಕೆ.ಆರ್.ಪೇಟೆ ತಾಲ್ಲೂಕಿನಲ್ಲಿ ಹರಿಯುವ ಪ್ರಮುಖ ನದಿ ಹೇಮಾವತಿ. ಇದು 'ಹೆಣ್ಣುನದಿ' ಎಂದು ಹೆಸರು ಪಡೆದಿದೆ. ಹೇಮಾವತಿ ಹೊಳೆಯನ್ನು 'ಎಣ್ಣೆಹೊಳೆ' ಎಂದು ಕರೆಯುತ್ತಾರೆ. ಈ ನದಿ ಚಿಕ್ಕಮಗಳೂರಿನ ಮೂಡಿಗೆರೆ ತಾಲ್ಲೂಕಿನ ಮೆಲಬಂಗಾಡಿಯ ಜಾವಳಿಯ ಬಲ್ಲಾಳರಾಯನ ದುರ್ಗದಲ್ಲಿ ಹುಟ್ಟಿ ದಕ್ಷಿಣಾಭಿಮುಖವಾಗಿ ಹರಿಯುವುದು. ಇದು ಕಿಕ್ಕೇರಿ ಹೋಬಳಿಯ ಗುಡ್ಡದ ಹೊಸಹಳ್ಳಿಯ ಬಳಿ ಪ್ರವೇಶಿಸಿ ಕೃಷ್ಣರಾಜಸಾಗರದ ಉತ್ತರದಲ್ಲಿ ಕಾವೇರಿಯನ್ನು ಕೂಡಿಕೊಳ್ಳುತ್ತದೆ.

ಹೇಮಾವತಿಯು ಕಾವೇರಿನದಿಯ ಮುಖ್ಯ ಉಪನದಿ. ಇದು ೨೫೮ ಕಿ.ಮೀ.ನಷ್ಟು ದೂರ ಹರಿದು ಕಾವೇರಿಯಲ್ಲಿ ವಿಲೀನಗೊಳ್ಳುತ್ತದೆ. ಗೊರೂರು ಬಳಿ ಹೇಮಾವತಿ ನದಿಗೆ ಅಡ್ಡಲಾಗಿ ಜಲಾಶಯ ನಿರ್ಮಾಣ ಮಾಡಲಾಗಿದೆ. ೧೧.೬೫೫ ಅಡಿ ಉದ್ದದ ೧೯೨ ಅಡಿ ಎತ್ತರದ ಕಟ್ಟೆಯನ್ನು ನಿರ್ಮಿಸಲಾಗಿದೆ. ಇದರ ಕಾರ್ಯಾರಂಭ ೧೯೬೭ರಲ್ಲಿ ಆಯಿತು. ಕಾಲುವೆ ಕೆಲಸಗಳು ೧೯೮೯ರ ವೇಳೆಗೆ ಮುಗಿಯಬೇಕಿತ್ತು. ಇದು ಸುಲಭಸಾಧ್ಯವಾಗದ ಮಾತಾಗಿದೆ. ಒಟ್ಟು ೬.೫೫ ಲಕ್ಷ ಎಕರೆ ಭೂಪ್ರದೇಶಕ್ಕೆ ನೀರುಣಿಸುವ, ಈ ನದಿ ಮಂಡ್ಯ ಜಿಲ್ಲೆಯಲ್ಲಿ ೨.೨೬.೮೯.೨೦ ಎಕರೆ ಭೂಪ್ರದೇಶಕ್ಕೆ ನೀರಾವರಿ ಸೌಲಭ್ಯ ಒದಗಿಸಿದೆ. ಕೃಷ್ಣರಾಜಪೇಟೆ ತಾಲ್ಲೂಕು ೪೪,೯೨೦ ಎಕರೆ ಭೂಪ್ರದೇಶ ನೀರಾವರಿ ಸೌಲಭ್ಯ ಪಡೆದುಕೊಂಡಿದೆ. ಹೇಮಾವತಿ ಜಲಾಶಯದ ಎ.ಜಿ.ರಾಮಚಂದ್ರರಾವ್ ನಾಲೆಯ ೧೨೬ ಕಿ.ಮೀ.ನಲ್ಲಿ ಕಾಲುವೆಗಳಲ್ಲಿ ನೀರು ಹರಿಯಬಿಟ್ಟಿದ್ದರೂ ಕಾಲುವೆ ಕಾಮಗಾರಿ ಪೂರ್ಣವಾಗಿಲ್ಲ.

ಈ ತಾಲ್ಲೂಕಿನ ಶೇ ೯೦% ಭಾಗದ ಜನ ವ್ಯವಸಾಯವನ್ನೇ ಅವಲಂಬಿಸಿದ್ದಾರೆ. ಹಾಗೆ ವ್ಯವಸಾಯ ಮಳೆಯನ್ನೇ ಅವಲಂಬಿಸಿದೆ. ಈ ತಾಲ್ಲೂಕಿನಲ್ಲಿ ಮರಳು ಮಿಶ್ರಿತ ಕೆಂಪುಮಣ್ಣಿನ ಪ್ರದೇಶವೇ ಅಧಿಕವಾಗಿ ಕಂಡುಬರುತ್ತದೆ. ಕೆಲವು ಪ್ರದೇಶಗಳಲ್ಲಿ ಜೇಡಿಮಣ್ಣಿನ ಭೂಮಿ ಇದೆ. ಬಂಜರುಭೂಮಿ ಅಧಿಕವಾಗಿದೆ.

ಈ ತಾಲ್ಲೂಕಿನಲ್ಲಿ ಒಟ್ಟು ೧೧ ಸಂತೆಗಳು ನಡೆಯುತ್ತಿದ್ದು, ಅವುಗಳು ನಡೆಯುವ ದಿನಗಳೆಂದರೆ ಕೆ.ಆರ್.ಪೇಟೆ ಬುಧವಾರ, ಹೊಸಹೊಳಲು – ಶನಿವಾರಗಳಿದ್ದು, ಈಗ ಅವೆರಡೂ ಸಂತೆಗಳೂ ಕೆ.ಆರ್.ಪೇಟೆಯ ನೂತನ ಮಾರುಕಟ್ಟೆಯ ಆವರಣದಲ್ಲಿ ನಡೆಯುತ್ತಿವೆ. ತೆಂಡೇಕೆರೆ – ಸೋಮವಾರ, ಅಕ್ಕಿಹೆಬ್ಬಾಳು ಸೋಮವಾರ, ಸಿಂಧಘಟ್ಟ – ಭಾನುವಾರ, ಕಿಕ್ಕೇರಿ – ಶುಕ್ರವಾರ, ಆನಗೊಳ – ಗುರುವಾರ, ಸಂತೇಬಾಚಹಳ್ಳಿ –

ಗುರುವಾರ, ಬೂಕನಕೆರೆ – ಶನಿವಾರ, ಸೋಮನಹಳ್ಳಿ – ಬುಧವಾರ, ಗವಿರಂಗಪ್ಪ ಸ್ವಾಮಿಬೆಟ್ಟ – ಮಂಗಳವಾರ, ಹೊಸಹೊಳಲು – ಭಾನುವಾರ.

ಸಾಂಸ್ಕೃತಿಕ ರಂಗದಲ್ಲಿ ಕೃಷ್ಣರಾಜಪೇಟೆ ತಾಲ್ಲೂಕು ಸಾಧನೆಯ ಮುಂಚೂಣಿಯಲ್ಲಿದೆ. ಈ ಜನ ಅನುಚಾನವಾಗಿ ಬೆಳೆದುಬಂದ ಜನಪರ ಸಾಹಿತ್ಯ ಮತ್ತು ಕಲೆಗಳನ್ನು ಕಾಪಾಡಿಕೊಂಡು ಬಂದಿದ್ದಾರೆ. ಕೋಲಾಟ, ಪೂಜಾಕುಣಿತ, ಸೋಮನಕುಣಿತ ಮೊದಲಾದ ಕಲೆಗಳು ಪ್ರಚಲಿತದಲ್ಲಿವೆ. ಹಾಗೆಯೇ ಮೈಸೂರು ಮಲ್ಲಿಗೆಯ ಕವಿ ಕೆ.ಎಸ್.ನರಸಿಂಹಸ್ವಾಮಿ, ಹಾಸ್ಯಕವಿ ಅ.ರಾ.ಮಿತ್ರ. ಸಾಹಿತ್ಯದ ಶತಾಯುಷಿ ಎ.ಎನ್.ಮೂರ್ತಿರಾಯರು. ಗಂಭೀರ ವಿಮರ್ಶಕರೆಂದೇ ಖ್ಯಾತರಾದ ಸುಜನ, ಜನಪದ ಸಾಹಿತ್ಯ ಕ್ಷೇತ್ರಕಾರ್ಯ ಸಂಗ್ರಹಕಾರ ಅರ್ಚಕ ಬಿ.ರಂಗಸ್ವಾಮಿ ಮೊದಲಾದ ಕವಿ, ಸಾಹಿತಿಗಳು ಅನೇಕರು ಈ ತಾಲ್ಲೂಕಿನವರಾಗಿದ್ದಾರೆ.

ಈ ತಾಲ್ಲೂಕಿನಲ್ಲಿ ಹೊಯ್ಸಳರ ದೇವಸ್ಥಾನಗಳು ಪ್ರಸಿದ್ಧವಾಗಿವೆ. ಸುಮಾರು ೧೨–೧೩ನೆಯ ಶತಮಾನದಲ್ಲಿ ಕಟ್ಟಲ್ಪಟ್ಟ ಇವು ತಾಲ್ಲೂಕಿನ ಅಗ್ರಹಾರ ಬಾಚನಹಳ್ಳಿ, ಅಘಲಾಯ, ಕಿಕ್ಕೇರಿ, ಗೋವಿಂದನಹಳ್ಳಿ, ತೆಂಗಿನಘಟ್ಟ, ತೊಣಚಿ, ಮಾದಾಪುರ ಮತ್ತು ಹೊಸಹೊಳಲು ಮುಂತಾದ ಗ್ರಾಮಗಳಲ್ಲಿವೆ. ಅಂಕನಹಳ್ಳಿಯಲ್ಲಿ ವ್ಯಾಸನ ತೋಳಕಲ್ಲು ರೀತಿಯ ಮಾಸ್ತಿಕಲ್ಲುಗಳಿವೆ. ಸಾಸಲು ಮತ್ತು ತೆಂಡೆಕೆರೆ ವೀರಶೈವರ ಯಾತ್ರಾಸ್ಥಳ. ಹೇಮಾವತಿಯ ದಡದಲ್ಲಿ ನಡೆಯುವ ಹೇಮಗಿರಿ ಜಾತ್ರೆ ಸುತ್ತಮುತ್ತಲಿನಲ್ಲಿ ಪ್ರಸಿದ್ಧವಾಗಿದೆ.

ಕೆ.ಆರ್.ಪೇಟೆ ಹಂತ ಹಂತವಾಗಿ ಸಾರಿಗೆ ವ್ಯವಸ್ಥೆಯಲ್ಲಿ ಪ್ರಗತಿಯನ್ನು ತಲುಪುತ್ತಿದೆ. ಮೈಸೂರು ಚನ್ನರಾಯಪಟ್ಟಣ ಹೆದ್ದಾರಿ ಇದೆ. ಈ ಹೆದ್ದಾರಿಯಲ್ಲಿ ಕೃ.ರಾ.ಪೇಟೆ ಹಾಗೂ ಭದ್ರಾವತಿ, ಶಿವಮೊಗ್ಗ, ಸಾಗರ, ಜೋಗ, ಧರ್ಮಸ್ಥಳ, ಹುಬ್ಬಳ್ಳಿ, ಬೆಳಗಾಂ, ಬಳ್ಳಾರಿ, ಗುಲ್ಬರ್ಗ, ಪಣಜಿ, ಕುಮಟ, ಕೆಮ್ಮಣ್ಣುಗುಂಡಿ, ನರಸಿಂಹರಾಜಪುರ, ಗದಗ ಮುಂತಾದ ಪ್ರಮುಖ ಸ್ಥಳಗಳಿಗೆ ಸರ್ಕಾರಿ ಬಸ್ಸುಗಳು ಸಂಚರಿಸುತ್ತವೆ. ಇನ್ನು ಮೈಸೂರು–ಅರಸೀಕೆರೆ ಕಡೆಗೆ ಹೋಗುವ ರೈಲ್ವೆ ಮಾರ್ಗವು ಈ ತಾಲ್ಲೂಕಿನಲ್ಲಿ ೨೨ ಮೈಲುಗಳಷ್ಟು ಚಾಚಿದೆ. ಸಂಪರ್ಕ ವ್ಯವಸ್ಥೆಯಲ್ಲಿ ಕೆ.ಆರ್.ಪೇಟೆ ತಾಲ್ಲೂಕು ಅಭಿವೃದ್ಧಿ ಹೊಂದುತ್ತಿದ್ದು ಈ ತಾಲ್ಲೂಕಿನಲ್ಲಿ ೫೫ ಅಂಚೆ ಕಚೇರಿಗಳು, ೮ ತಂತಿ ಕಛೇರಿಗಳು ಇವೆ. ೭ ದೂರವಾಣಿ ವಿನಿಮಯ ಕೇಂದ್ರಗಳಿವೆ.

ಕೆ.ಆರ್.ಪೇಟೆ ತಾಲ್ಲೂಕಿನ ಜನರ ಸಾಮಾಜಿಕ ಬದುಕು ಬದಲಾವಣೆಯ ಹಂತವನ್ನು ತಲುಪಿಲ್ಲ. ಹೇಮಾವತಿ ನೀರು ಹರಿಯುವ ಸನಿಹದಲ್ಲಿರುವ ಅಕ್ಕಿಹೆಬ್ಬಾಳು ಮತ್ತು ಕಿಕ್ಕೇರಿ ಹೋಬಳಿಗಳು ಆರ್ಥಿಕವಾಗಿ ಬಲಿಷ್ಠವಾಗಿರುವುದು ಬಿಟ್ಟರೆ, ಮಿಕ್ಕೆಲ್ಲಾ ಹೋಬಳಿಗಳ ಜನರ ಜೀವನಮಟ್ಟ ಕೆಳಮಟ್ಟದ್ದಾಗಿದೆ. ಸಂತೆ–ಬಾಚಹಳ್ಳಿ

ಹೋಬಳಿಯೊಂದನ್ನು ಹೊರತುಪಡಿಸಿದರೆ ಉಳಿದ ಪ್ರದೇಶದ ಜನಜೀವನ ಕ್ರಮೇಣ ಸುಧಾರಣೆಯಾಗುತ್ತಿದೆ. ಆಗಾಗ್ಗೆ ಸಂಭವಿಸುತ್ತಿರುವ ಬರದ ಸಿಡಿತಕ್ಕೆ ಗುರಿಯಾದ ತಾಲ್ಲೂಕಿನ ಬಹುತೇಕ ಜನ ಮುಂಬೈ ಮತ್ತಿತರ ಸ್ಥಳಗಳಿಗೆ ವಲಸೆ ಹೋಗಿ ಜೀವನ ನಡೆಸುತ್ತಿರುವುದನ್ನು ನೋಡಬಹುದು.

ಕೆ.ಆರ್.ಪೇಟೆ ತಾಲ್ಲೂಕಿನಲ್ಲಿ ಒಕ್ಕಲಿಗ, ಕುರುಬ, ತೊಗಟವೀರರು, ಲಿಂಗಾಯಿತರು, ವೈಷ್ಣವರು, ಮುಸ್ಲಿಮರು, ಗಾಣಿಗರು, ಜಾಡಮಾಲಿ, ಕುಂಬಾರ, ದೇವಾಂಗ, ಕ್ರಿಶ್ಚಿಯನ್, ರಜಪೂತ, ಹರಿಜನರು, ಬೆಸ್ತರು, ಕುರುಹಿನಶೆಟ್ಟರು, ಜೈನರು, ಕೋಮಟಿಗಶೆಟ್ಟರು, ಬ್ರಾಹ್ಮಣರು, ನಾಯಕರು, ವಿಶ್ವಕರ್ಮರು, ಕ್ಷೌರಿಕರು ಮುಂತಾದವರಿದ್ದಾರೆ. ಕೆಲವು ಪ್ರದೇಶಗಳಲ್ಲಿ ಲಿಂಗಾಯಿತರು, ಕುರುಬರು ಅಧಿಕವಾಗಿದ್ದರೂ ತಾಲ್ಲೂಕಿನಲ್ಲಿ ಒಕ್ಕಲಿಗರೇ ಪ್ರಬಲರಾಗಿದ್ದಾರೆ. ಕೆ.ಆರ್.ಪೇಟೆ ಪುರಸಭೆ ವ್ಯಾಪ್ತಿಯಲ್ಲಿ ಎಲ್ಲಾ ಜಾತಿಯ ವರ್ಗದವರು ಇದ್ದಾರೆ.

## ಕೆ.ಆರ್.ಪೇಟೆ ತಾಲ್ಲೂಕಿನ ಪಕ್ಷಿನೋಟ

### ೨೦೦೪–೦೫ರ ಅಂಕಿ–ಅಂಶದ ಪ್ರಕಾರ, ೨೦೦೧ರ ಜನಗಣತಿಯ ಪ್ರಕಾರ

| | |
|---|---|
| ಹೋಬಳಿಗಳು | ೬ |
| ಗ್ರಾಮಪಂಚಾಯಿತಿಗಳು | ೩೪ |
| ಜನವಸತಿ ಇರುವ ಗ್ರಾಮಗಳು | ೨೯೭ |
| ಜನವಸತಿ ಇಲ್ಲದಿರುವ ಗ್ರಾಮಗಳು | ೧೯ |
| ಪಟ್ಟಣ | ೧ |
| ಪುರಸಭೆ | ೧ |
| ವಿಸ್ತೀರ್ಣ (ಚ.ಕಿ.ಮೀ.ಗಳಲ್ಲಿ) | ೮೮೬.೦೪ |
| ಜನಸಂಖ್ಯೆ ಒಟ್ಟು | ೨೪೮೨೪೫ |
| ಜನಸಂಖ್ಯೆ (ಗಂಡು) | ೧೨೩೫೩೧ |
| ಜನಸಂಖ್ಯೆ (ಹೆಣ್ಣು) | ೧೨೪೭೧೪ |
| ಜನಸಂಖ್ಯೆ (ಗ್ರಾಮೀಣ) | ೨೨೫೬೬೫ |
| ಜನಸಂಖ್ಯೆ (ಪಟ್ಟಣ) | ೨೨೫೮೦ |
| ಜನಸಾಂದ್ರತೆ (ಪ್ರತಿ ಚ.ಕಿ.ಮೀ) | ೨೮೦೪೭೧ |
| ಪರಿಶಿಷ್ಟಜಾತಿ (ಗ್ರಾಮಾಂತರ) | ೨೭೨೨೫ |
| ಪರಿಶಿಷ್ಟಜಾತಿ (ಪಟ್ಟಣ) | ೩೩೭೯ |
| ಪರಿಶಿಷ್ಟಪಂಗಡ (ಗ್ರಾಮಾಂತರ) | ೪೯೧೦ |

| | |
|---|---|
| ಪರಿಶಿಷ್ಟಪಂಗಡ (ಪಟ್ಟಣ) | ೨೭೦ |
| ಅಕ್ಷರಸ್ಥರು | ೧೩೪೫೦೬ |
| ಸಾಕ್ಷರತೆ | ೬೧.೬ |
| ಭೌಗೋಳಿಕ ವಿಸ್ತೀರ್ಣ (ಹೆಕ್ಟೇರ್) | ೯೧೫೫೧ |
| ಭೌಗೋಳಿಕ ಅರಣ್ಯ (ಹೆಕ್ಟೇರ್) | ೫೭೬೦ |
| ವ್ಯವಸಾಯೇತರ ಭೂಮಿ(ಹೆಕ್ಟೇರ್) | ೮೯೬೪ |
| ಬಂಜರುಭೂಮಿ (ಹೆಕ್ಟೇರ್) | ೩೫೨೦ |
| ಸಾಗುವಳಿಗೆ ಯೋಗ್ಯವಾದ ಬಂಜರು(ಹೆಕ್ಟೇರ್) | ೬೫೧೦ |
| ಖಾಯಂ ಗೋಮಾಳ (ಹೆಕ್ಟೇರ್) | ೧೫೪೨೩ |
| ತೋಪುಗಳು (ಹೆಕ್ಟೇರ್) | ೩೦೦ |
| ಪ್ರಾಥಮಿಕ ಶಾಲೆಗಳು | ೩೫೧ |
| ಪ್ರೌಢಶಾಲೆಗಳು | ೨೬ |
| ಪದವಿಪೂರ್ವ ಕಾಲೇಜುಗಳು | ೧೦ |
| ಪದವಿ ಕಾಲೇಜು | ೧ ಎರಡು ಸೇರ್ಪಡೆ ಒಟ್ಟು -೩ |
| ಇತರೆ ಕಾಲೇಜು | ೧ ಪಾಲಿಟೆಕ್ನಿಕ್, |
| | ಹೊಸದಾಗಿ ೧ ಇಂಜಿನಿಯರಿಂಗ್ ಕಾಲೇಜ್ |
| ಗ್ರಂಥಾಲಯಗಳು | ೨೨ |

ಈ ತಾಲ್ಲೂಕಿನಲ್ಲಿ ಆರು ಹೋಬಳಿಗಳೂ, ೩೧೭ ಗ್ರಾಮಗಳೂ ಇವೆ. ಅಕ್ಕಿಹೆಬ್ಬಾಳು, ಕಿಕ್ಕೇರಿ, ಶೀಳನೆರೆ, ಕೃಷ್ಣರಾಜಪೇಟೆ, ಸಂತೇಬಾಚಹಳ್ಳಿ, ಬೂಕನಕೆರೆ ಇವು ಈ ತಾಲ್ಲೂಕಿನ ಹೋಬಳಿಗಳು.

**'ಅಕ್ಕಿಹೆಬ್ಬಾಳು'** ಅಕ್ಕರೆಯ ಸಕ್ಕರೆಯ ಸೀಮೆ ಮಂಡ್ಯಜಿಲ್ಲೆಯ, ಕೃಷ್ಣರಾಜಪೇಟೆ ತಾಲ್ಲೂಕಿನ ಅಕ್ಕಿಹೆಬ್ಬಾಳು ಒಂದು ಐತಿಹಾಸಿಕ ಪುಣ್ಯಕ್ಷೇತ್ರ ಸ್ಥಳವೆಂದು ಖ್ಯಾತಿ ಪಡೆದಿದೆ. ಕೇ.ಆರ್.ಪೇಟೆಯ ನೈರುತ್ಯ ದಿಕ್ಕಿಗೆ ಕೃಷ್ಣರಾಜನಗರಕ್ಕೆ ಹೋಗುವ ದಾರಿಯ ಹದಿನಾಲ್ಕು ಕಿ.ಮೀ. ದೂರದಲ್ಲಿ ಅಕ್ಕಿಹೆಬ್ಬಾಳು ಈಗ ಪ್ರಮುಖ ಹೋಬಳಿ ಕೇಂದ್ರ ಸ್ಥಳವಾಗಿದೆ. ರೈಲ್ವೆ ನಿಲ್ದಾಣವನ್ನು ಹೊಂದಿರುವ ಅಕ್ಕಿಹೆಬ್ಬಾಳು ಕನ್ನಡ ನಾಡಿನ ಇತಿಹಾಸ, ಕಲೆ, ಸಾಹಿತ್ಯ, ಜಾನಪದ ಸಂಸ್ಕೃತಿಗೆ ನೀಡಿರುವ ಕೊಡುಗೆ ಹಿರಿದಾದುದು, ಅಮೂಲ್ಯವಾದುದು.

ಅಕ್ಕಿಹೆಬ್ಬಾಳು ಪ್ರತಿಬಾಶ್ರೀಗಳ ತವರೂರು. ಕನ್ನಡದ ಶ್ರೇಷ್ಠ ಚಿಂತಕ, ಸಾಹಿತಿ ಅ.ನ.ಮೂರ್ತಿ ರಾಯರು, ಬೆಂಗಳೂರಿನಲ್ಲಿ ಪ್ರಥಮ ಕಲಾಮಂದಿರ ನಿರ್ಮಿಸಿದ ಅ.ನ.ಸುಬ್ಬರಾಯರು. ಅಕ್ಕಿಹೆಬ್ಬಾಳಿನ ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ಕಾರಣಕರ್ತರಾದ

ಡಾ. ಎಸ್.ಸುಬ್ಬರಾಯರು ಆಧುನಿಕ ಕನ್ನಡ ಪ್ರಬಂಧ ಸಾಹಿತ್ಯದ ನಗೆಯ ಮಿಂಚು ಎಂದೆ ಸುಪ್ರಸಿದ್ಧರಾದ ಅ.ರಾ.ಮಿತ್ರ, ಆಕಾಶವಾಣಿ ಈರಣ್ಣರೆಂದೇ ಜನಜನಿತರಾಗಿ ಕರ್ನಾಟಕ ರಂಗಭೂಮಿಯಲ್ಲಿ ತಮ್ಮದೆ ಆದ ಛಾಪನ್ನು ಮೂಡಿಸಿರುವ ಎ.ಎಸ್.ಮೂರ್ತಿ, ಪತ್ರಿಕೋದ್ಯಮಕ್ಕೆ ಕೀರ್ತಿತಂದ ಜನಮಿತ್ರದ ಕೃನ.ಮೂರ್ತಿ, ದಕ್ಷಿಣ ಭಾರತದಲ್ಲಿಯೇ ಪ್ರಥಮ ಬಾರಿಗೆ ಹಿಂದಿ ಸಾಹಿತ್ಯದಲ್ಲಿ ಎಂ.ಎ.ಪದವಿಗಳಿಸಿದ ಪ್ರೊ. ನಾಗಪ್ಪ, ಕಾದಂಬರಿಕಾರರಾಗಿ ಅ.ರಾ.ಆನಂದ, ಶಿಶುಸಾಹಿತ್ಯದಲ್ಲಿ ಕೃಷಿಮಾಡಿರುವ ಅ.ರಾ.ಚಂದ್ರ, ಲಾವಣಿ ಸಂಗ್ರಹಕಾರರಾಗಿ ದಾಖಲಾಗಿರುವ ಎ.ಕೆ.ಪುಟ್ಟರಾಮು, ವಿಡಂಬನ ಸಾಹಿತ್ಯದ ಅ.ರಾ.ಶೇಷಗಿರಿ, ಕರ್ನಾಟಕ ನಾಟಕ ಅಕಾಡೆಮಿಯ ಸದಸ್ಯರಾಗಿರುವ ಎ.ಆರ್.ಶಶಿಧರ್ ಬಾರಿಘಾಟ್, ಭರತನಾಟ್ಯದಲ್ಲಿ ಪರಿಣಿತಿ ಪಡೆದ ಶ್ರೀಧರ್, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಹಾಯಕ ನಿರ್ದೇಶಕರಾಗಿರುವ ಎ.ಎಸ್.ನಾಗರಾಜು ಮೊದಲಾದವರೆಲ್ಲರೂ ಅಕ್ಕಿಹೆಬ್ಬಾಳಿಗೆ ಕೀರ್ತಿತಂದಿರುವ ಮಹನೀಯರು.

ಅಕ್ಕಿಹೆಬ್ಬಾಳು ಎಂಬ ಹೆಸರು ವಿಶಿಷ್ಠಪೂರ್ಣವಾದುದು. ಇದನ್ನು ಬಗೆದಂತೆಲ್ಲ ಅಕ್ಕಿಹೆಬ್ಬಾಳಿನ ಸಮಗ್ರ ದರ್ಶನವಾಗತೊಡಗುತ್ತದೆ. ಅಕ್ಕಿಹೆಬ್ಬಾಳು ಎಂಬ ಪದ ನಾಮವಾಚಿರೂಪಗೊಂಡ ವಿಚಾರ ಕುತೂಹಲವಾಗಿದೆ. ಇಲ್ಲಿನ ಶ್ರೀಕೊಂಗಳೇಶ್ವರ ಹಾಗೂ ಶ್ರೀಲಕ್ಷ್ಮೀನರಸಿಂಹಸ್ವಾಮಿ ದೇವಾಲಯಗಳು ಅಕ್ಕಿಹೆಬ್ಬಾಳು ಊರಿನ ಸಮಸ್ತ ಬೆಳವಣಿಗೆಯ ಮೂಲಕೇಂದ್ರಗಳಾಗಿವೆ. ಹೊಯ್ಸಳರ ಕಾಲದ ರಚನೆಯಾಗಿರುವ ಶಿವಾಲಯದಲ್ಲಿ ದೊರಕಿರುವ ಹದಿಮೂರನೆ ಶತಮಾನದ ೨ ಶಾಸನಗಳು ಅಕ್ಕಿಹೆಬ್ಬಾಳು ಊರಿನ ಸಮಸ್ತ ಬೆಳವಣಿಗೆಯ ಮೊತ್ತಮೊದಲ ಐತಿಹಾಸಿಕ ದಾಖಲೆಗಳಾಗಿವೆ. ಪೂರ್ವಾಭಿಮುಖವಾಗಿರುವ ಈಶ್ವರ ಗುಡಿಯ ರಂಗಮಂಟಪದ ನೈರುತ್ಯ ಕಂಬದ ಕೆಳಭಾಗದ ಶಾಸನದಲ್ಲಿ ಉಲ್ಲೇಖವಾಗಿರುವ ಹೆಬ್ಬೊಳಲ ಕೋಂಗಳೇಶ್ವರ ದೇವರಿಗೆ ಸುಂಕದ ಹೆಮ್ಮಾಡಿಯಣ್ಣ ವರಸನಿಬನ್ದವಾಗಿ ನಂದದೀವಿಗೆಗೆ ಕೊಟ್ಟ ಗದ್ಯಾಣ್ಣ ಈ ಧರ್ಮದ ಪ್ರತಿಪ್ಟಾಳಿಸಿದವರು ಸಿವಲೋಕ ಪ್ರಾಪ್ತರು ಈ ಧರ್ಮ್ಮವ (ಕೆ) ಡಿಸಿ (ಎಪಿಗ್ರಾಫಿಯ ಕರ್ನಾಟಕ ಸಂಪುಟ ಆರು) ಎಂಬ ಸಾಲುಗಳಲ್ಲಿರುವ ಹೆಬ್ಬೋಳಲು ಎಂಬ ಸ್ಥಳವಾಚಿಯೇ ಅಕ್ಕಿಹೆಬ್ಬಾಳು ಸ್ಥಳನಾಮದ ಮೂಲ ಆಕಾರವಾಗಿದೆ.

ಅಕ್ಕಿಹೆಬ್ಬಾಳು ಸ್ಥಳನಾಮದ ಐತಿಹಾಸಿಕ ರೂಪವು ಹೆಬ್ಬೋಳಲು ಹೊಯ್ಸಳರ ಕಾಲದಲ್ಲಿ ಒಂದು ಪ್ರಮುಖ ನೆಲೆಯಾಗಿರುವುದಾಗಿ ಗುರುತಿಸಲ್ಪಟ್ಟಿದೆ. ಈ ಸ್ಥಳದ ನೀರಿನ ಮೂಲ ಆಕರ ಹೆಬ್ಬಳ್ಳ (ಹಿರಿದಾದ ಬಯಲಿನ ಹಳ್ಳ)ವೇ ಹೆಬ್ಬೋಳಲು ಹೆಸರಿನ ಮೂಲ ರೂಪವೆನಿಸಿದೆ. ಇಂದಿನ ಹೇಮಾವತಿ ಹೊಳೆಯನ್ನು ಅಂದಿನ ನಮ್ಮ ಪೂರ್ವಜರು ಹೆಬ್ಬಳ್ಳವೆಂದು ಕರೆಯುತ್ತಿದ್ದರು. ಈ ಹೆಬ್ಬಳದ ಸುತ್ತಲಿನ ಭೂಮಿ ಬೇಸಾಯಕ್ಕೆ ಒಳಪಟ್ಟು ಫಲವತ್ತಾದಂತೆಲ್ಲಾ ಜನವಾಸಿಸುವುದು ಹೆಚ್ಚಾಗಿ ಊರು ಹಿರಿದಾಗಿ ಹೆಬ್ಬೊಳಲು ಅಂದರೆ

ಹಿರಿದಾದ ಪಟ್ಟಣವೆನಿಸಿಕೊಂಡಿತು. ದಿನೆ ದಿನೆ ಸಮೃದ್ಧವಾಗತೊಡಗಿದ ಈ ಹೆಬ್ಬೊಳಲು ಪ್ರದೇಶವನ್ನು ಕ್ರಿ.ಶ.೧೬ನೇ ಶತಮಾನದಲ್ಲಿ ಮೈಸೂರಿನ ಯದುವಂಶದ ರಾಜಒಡೆಯರು (೧೫೭೮-೧೬೧೭) ಹೊಳೆನರಸೀಪುರದ ನರಸಿಂಹನಾಯಕ (ನರಸನಾಯಕ)ನಿಂದ ವಶಪಡಿಸಿಕೊಳ್ಳುವುದು ಈ ನೆಲದ ಬಹುಮುಖ್ಯವಾದ ಚಾರಿತ್ರಿಕ ಸಂಗತಿಯಾಗಿದೆ. ಹೊಳೆನರಸೀಪುರದ ನರಸಿಂಹನಾಯಕರ ಕಾಲದಲ್ಲಿಯೇ ಅಕ್ಕಿಹೆಬ್ಬಾಳಿನ ಶ್ರೀಲಕ್ಷ್ಮೀನರಸಿಂಹ ದೇವಾಲಯ ರಚನೆಯಾಗಿದ್ದಿರಬಹುದೆಂಬ ಅಭಿಪ್ರಾಯವಿದೆ. ಮೈಸೂರು ಅರಸರ ಆಡಳಿತದಲ್ಲಿ ಹೆಬ್ಬೊಳಲು ಪ್ರದೇಶವು ನೀರಾವರಿ ಅಭಿವೃದ್ಧಿಗಳೊಡನೆ ಬತ್ತದ ಗದ್ದೆ (ಶಾಲಿವಾಹನ)ಗಳ ಕಣಜವಾಗಿ ಮಾರ್ಪಡುತ್ತದೆ. ಇಲ್ಲಿನ ಬತ್ತದ ಉತ್ಪನ್ನ ಅಕ್ಕಿಯ ಸವಿ ಪ್ರಖ್ಯಾತವಾಗುತ್ತದೆ. ಈ ಹೆಬ್ಬೊಳಲು ಅಕ್ಕಿವಿಶೇಷಣ ಶಬ್ದವೊಡಗೂಡಿ ಅಕ್ಕಿಹೆಬ್ಬೊಳಲು ನಾಮಾಂಕಿತ ಪ್ರಚಲಿತಕ್ಕೆ ಬರುತ್ತದೆ. ಈ ಹೆಸರು ಕಾಲಾನುಕ್ರಮದಲ್ಲಿ ನಮ್ಮ ಪೂರ್ವಜರ ಭಾಷಾಸುಲಭೀಕರಣದಿಂದಾಗಿ ಅಕ್ಕಿಹೆಬ್ಬಾಳು ಎಂದು ರೂಢಿಗೆಬರುತ್ತದೆ.

ಗ್ರಾಮದ ವ್ಯಾಪ್ತಿಯಲ್ಲಿ ಶೇ. ೩೫ರಷ್ಟು ಒಕ್ಕಲಿಗ ಸಮುದಾಯ. ಶೇ. ೩೦ರಷ್ಟು ಕುರುಬ ಜನಾಂಗ, ಶೇ. ೧೫ರಷ್ಟು ಪ.ಪಂಗಡ, ಶೇ. ೧೦ರಷ್ಟು, ಪ.ಜಾತಿ ಉಳಿದಂತೆ ಶೆಟ್ಟರು, ವಿಶ್ವಕರ್ಮಿಗಳು, ಮರಾಠರು, ಮುಸ್ಲಿಮರು ವಾಸಿಸುತ್ತಿದ್ದಾರೆ. ಮೇಲ್ನೋಟದಲ್ಲಿ ಈ ಸಮುದಾಯಗಳಲ್ಲಿ ಯಾವುದೇ ಭೇದ ಭಾವ ಇಲ್ಲದೆ ನಾವೆಲ್ಲ ಒಂದೇ ಎನ್ನುವ ಭಾವನೆಯಿಂದ ಜೀವನ ನಡೆಸುತ್ತಿದ್ದಾರೆ. ಆರ್ಥಿಕ ಮಟ್ಟದಲ್ಲಿ ಕುಗ್ಗಿದವರು ಬಹಳ ಜನರಿದ್ದಾರೆ. ಈ ಕಾರಣಕ್ಕಾಗಿ ಬಾಂಬೆ, ಬೆಂಗಳೂರು ನಗರಗಳಿಗೆ ಉದ್ಯೋಗ ಅರಸಿ ವಲಸೆ ಹೋಗುವುದನ್ನು ಪ್ರಧಾನವಾಗಿ ಕಾಣುತ್ತೇವೆ. ಈ ಅಕ್ಕಿಹೆಬ್ಬಾಲು ಹೋಬಳಿಗೆ ಐದು ಗ್ರಾಮಪಂಚಾಯಿತಿ ಗಳು ಸೇರುತ್ತವೆ. ಅವುಗಳೆಂದರೆ, ಅಕ್ಕಿಹೆಬ್ಬಾಳು, ಬೀರವಳ್ಳಿ, ಮಂದಗೆರೆ, ಆಲಂಬಾಡಿಕಾವಲು, ಸೋಮನಹಳ್ಳಿ.

ಒಂದು ಗ್ರಾಮದ ಹಲವು ವಿಷಯಗಳು ಆ ಗ್ರಾಮದ ಅಥವಾ ಆ ಪ್ರದೇಶದ ಮಾಹಿತಿಯನ್ನು ದೊರಕಿಸಿಕೊಡಲು ಸಹಾಯಕವಾಗಿರುತ್ತವೆ. ಈ ಹಿನ್ನೆಲೆಯಲ್ಲಿ ಮಂಡ್ಯಜಿಲ್ಲೆ, ಕೆ.ಆರ್.ಪೇಟೆ ತಾಲ್ಲೂಕು, ಅಕ್ಕಿಹೆಬ್ಬಾಳು ಹೋಬಳಿ, ಬೀರವಳ್ಳಿ ಗ್ರಾಮಪಂಚಾಯಿತಿ ವ್ಯಾಪ್ತಿಗೆ ಬರುವ 'ಗುಬ್ಬಹಳ್ಳಿ ಒಂದು ಅಧ್ಯಯನ' ಎಂಬ ಶೀರ್ಷಿಕೆಯಡಿಯಲ್ಲಿ ಈ ಸ್ಥಳದ ಅಧ್ಯಯನವನ್ನು ಕೈಗೊಂಡಿದ್ದೇನೆ. ಈಗಾಗಲೇ ಹತ್ತು ಹಲವು ವಿಷಯಗಳನ್ನು ತನ್ನ ಒಡಲಿನಲ್ಲಿ ಉದುಗಿಸಿಕೊಂಡಿರುವ ಈ ಗ್ರಾಮವನ್ನು ನನ್ನ ಸೂಕ್ಷ್ಮ ಹಿನ್ನೆಲೆಯ ಅಧ್ಯಯನಕ್ಕೆ ಒಳಪಡಿಸಿಕೊಂಡಿದ್ದೇನೆ.

ಗುಬ್ಬಹಳ್ಳಿ ಗ್ರಾಮದಲ್ಲಿ ದೊರೆಯುವಂತಹ ಮಾಹಿತಿಗಳ ಪ್ರಕಾರ ಇಲ್ಲಿನ ಭೌಗೋಳಿಕ ಪರಿಸರ, ಇತಿಹಾಸ, ದೇವಾಲಯಗಳು ಮತ್ತು ಜನರ ಧಾರ್ಮಿಕ ನಂಬಿಕೆಗಳು

ಧರ್ಮಾಚರಣೆಗಳು, ಜಾತಿ ಜನಾಂಗಗಳು, ಐತಿಹಾಸಿಕ ಹಿನ್ನೆಲೆ, ಮಳೆ, ಬೆಳೆ, ಕಲೆ, ಕೈಕಸುಬುಗಳು, ಸಂಪರ್ಕಸಾಧನಗಳು, ಶೈಕ್ಷಣಿಕ ಗುಣಮಟ್ಟ ಹಾಗೂ ಅವುಗಳ ವಿಕಸನ ಮತ್ತು ಒಂದು ನಾಡಿನ ಜನತೆಯನ್ನು ಅರ್ಥ ಮಾಡಿಕೊಳ್ಳಲು ನೆರವಾಗುವ ಮಾಹಿತಿಗಳನ್ನು ತಿಳಿಸಿಕೊಡುವ ಪ್ರಯತ್ನ ಮಾಡಲಾಗಿದೆ.

ನಾವು ಒಂದು ಗ್ರಾಮದ ಬಗೆಗೆ ಅಧ್ಯಯನ ಕೈಗೊಳ್ಳುವ ಮೊದಲು ನಮಗೆ ದೊರೆಯುವ ಶಾಸನಗಳು, ವ್ಯಕ್ತಿ ಮಾಹಿತಿಗಳನ್ನು ಪ್ರಮುಖ ಆಧಾರಗಳಾಗಿ ಅವಲಂಬಿಸಬೇಕಾಗುತ್ತದೆ. ಒಂದು ಗ್ರಾಮದ ಸಮಗ್ರ ಅಧ್ಯಯನದಲ್ಲಿ ಜನಪದ ತನ್ನದೇ ಆದ ಪ್ರಮುಖ ಪಾತ್ರ ವಹಿಸುತ್ತದೆ. ಒಂದು ಗ್ರಾಮದ ಜನಪದ ಅಧ್ಯಯನವೆಂದರೆ "ಅಲ್ಲಿಯ ಜನಾಂಗದ ಬದುಕಿನ ವಿಧಾನ ಮತ್ತು ಅಧ್ಯಯನ"[೧] ಎಂದರ್ಥ. ಇದನ್ನೇ ಸಾಂಸ್ಕೃತಿಕ ಅಧ್ಯಯನ ಎಂದು ಕರೆಯಬಹುದು. ಸಂಸ್ಕೃತಿ ಎಂದರೆ ಅದರಲ್ಲಿ ನೈತಿಕವಾಗಿ ಕೆಟ್ಟ–ಒಳ್ಳೆಯ, ವಿಕಾಸದ ದೃಷ್ಟಿಯಿಂದ ಹಿಂದುಳಿದ –ಮುಂದುವರಿದ, ಶ್ರೇಣೀಕರಣದ ನೆಲೆಯಿಂದ ಮೇಲು–ಕೀಳು ಎಂಬ ಪರಿಭಾಷೆಯಲ್ಲಿ ಇದನ್ನು ಅಳೆಯಲು ಸಾಧ್ಯವಿಲ್ಲ. ಸಮುದಾಯಗಳ ಎಲ್ಲಾ ಬಗೆಯ ನಂಬಿಕೆ ಆಚರಣೆಗಳನ್ನು ಸಂಸ್ಕೃತಿ ಎಂದು ಒಪ್ಪಿಕೊಳ್ಳಬೇಕು. ಒಟ್ಟಾರೆ ಸಂಸ್ಕೃತಿ ಎಂಬು ಬಿಡಿಯಾಗಿಯೂ, ಇಡಿಯಾಗಿಯೂ ಇದ್ದು ಅದರ ಕೂಲಂಕಷವಾದ ಪರಿವೀಕ್ಷಣೆಯೇ ಸಾಂಸ್ಕೃತಿಕ ಅಥವಾ ಸಮಗ್ರ ಅಧ್ಯಯನ ವಾಗುತ್ತದೆ.

ಸಮಗ್ರ ಅಧ್ಯಯನದಲ್ಲಿ ಜಾನಪದ ಒಂದು ರೀತಿಯಲ್ಲಿ ಚಾರಿತ್ರಿಕ ನೆನಮುಗಳ ಅಧ್ಯಯನವೇ ಆಗಿದೆ. ಜನಪದ ಸಾಹಿತ್ಯವು ಜನತೆಯ ಮನಸ್ಸನ್ನು ಮತ್ತು ಹೃದಯವನ್ನು ತಿಳಿಯಲು ನಮಗೆ ಸಹಕಾರಿಯಾಗಿದೆ. ಹಳ್ಳಿಗರ ಹೃದಯಾಂತರಾಲದಲ್ಲಿ ತುಂಬಿರುವ ಭಾವನೆಗಳೇ ಜನಪದ. 'ನುಡಿದಿದ್ದೇ ವೇದ ನಡೆದದ್ದೇ ಯಾಗ' ಎನ್ನುವ ಸಹಜ ಸಮ್ಮಾನಗಳ ಬದುಕು. ಅದು ಬೆಳೆದು, ಪರಿಷ್ಕೃತವಾಗಿ, ವೃದ್ಧಿಯಾಗಿ ಕವಿವಾಣಿಯಾಗಿ ಜಾನಪದವಾಯ್ತು. ಈ ಜಾನಪದ ಸಾಹಿತ್ಯವು ಹಳ್ಳಿಗರ ಸ್ವಾಭಾವಿಕವಾದ ಸಾಂಸ್ಕೃತಿಕ ಪ್ರತಿಬಿಂಬವೇ ಆಗಿದೆ.

ನನ್ನ ಈ 'ಗುಬ್ಬಹಳ್ಳಿ ಒಂದು ಅಧ್ಯಯನ'ದ ಮುಖ್ಯ ಉದ್ದೇಶವೇನೆಂದರೆ, ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದ ಎಂ.ಫಿಲ್. ಪದವಿಯ ಭಾಗವಾದ ಸಂಶೋಧನಾ ನಿಬಂಧದ ಕಾರಣದಿಂದ ಈ ಅಧ್ಯಯನವನ್ನು ನಡೆಸಲಾಗಿದೆ. ಈ ನಿಬಂಧದಲ್ಲಿ ಒಟ್ಟು ಆರು ಅಧ್ಯಾಯಗಳಿದ್ದು ಮೊದಲನೆಯದರಲ್ಲಿ ಉದ್ದೇಶ ಮತ್ತು ವ್ಯಾಪ್ತಿಯನ್ನು ಒಳಗೊಂಡಿದ್ದು, ಎರಡನೇ ಅಧ್ಯಾಯವು ಭೌಗೋಳಿಕ ಮತ್ತು ಚಾರಿತ್ರಿಕ

---

೧. ಸಾಂಸ್ಕೃತಿಕ ಅಧ್ಯಯನ– ರೆಹಮತ್ ತರೀಕೆರೆ, ಪು. ೧೦

ಹಿನ್ನೆಲೆಯನ್ನು ತಿಳಿಸುತ್ತದೆ. ಮೂರನೇ ಅಧ್ಯಾಯದಲ್ಲಿ ಗುಬ್ಬಹಳ್ಳಿಯ ದೇವಾಲಯಗಳು, ಉತ್ಸವಗಳು ಮತ್ತು ಹಬ್ಬಗಳನ್ನು ವಿಶ್ಲೇಷಿಸಲಾಗಿದೆ. ನಾಲ್ಕನೇ ಅಧ್ಯಾಯದಲ್ಲಿ ಗುಬ್ಬಹಳ್ಳಿಯ ವಿಶೇಷ ನಂಬಿಕೆಗಳು ಮತ್ತು ಸಂಪ್ರದಾಯಗಳನ್ನು ತಿಳಿಸಲಾಗಿದೆ. ಐದನೇ ಅಧ್ಯಾಯದಲ್ಲಿ ಗುಬ್ಬಹಳ್ಳಿಯ ಕಲೆ ಮತ್ತು ಕಲಾವರನ್ನು ಪರಿಚಯಿಸಲಾಗಿದೆ. ಆರನೇ ಅಧ್ಯಾಯದಲ್ಲಿ ಗುಬ್ಬಹಳ್ಳಿಯ ಶೈಕ್ಷಣಿಕ, ಆರ್ಥಿಕ, ಸಾಮಾಜಿಕ ಬದುಕನ್ನು ಒಳಗೊಂಡಿದ್ದು, ಅಂತಿಮವಾಗಿ ಉಪಸಂಹಾರದೊಂದಿಗೆ ಮುಕ್ತಾಯಗೊಂಡಿದ್ದು ಎಲ್ಲಾ ಮುಖಗಳ ಸಹಿತ ಪರಿಚಯ ಮಾಡಿಕೊಡುವ ಉದ್ದೇಶವನ್ನು ನಿಬಂಧ ಒಳಗೊಂಡಿದೆ.

ಯಾವುದೇ ಹಳ್ಳಿಯಾಗಲಿ, ಪ್ರದೇಶವಾಗಲಿ ತನ್ನದೆ ಆದ ವಿಶಿಷ್ಠ ವಿಷಯಗಳಿಂದ ಸಾಕಷ್ಟು ಶ್ರೀಮಂತಿಕೆಯನ್ನು ಪಡೆದುಕೊಂಡಿರುತ್ತದೆ. ಒಂದು ವೇಳೆ ಈ ಸಾಂಸ್ಕೃತಿಕ, ಐತಿಹಾಸಿಕ ಅಂಶಗಳು ಕಾಲದ ಸುಳಿಯಲ್ಲಿ ಸಿಲುಕಿ ಮರೆಯಾಗಿ ಹೋಗಬಹುದು. ಒಂದು ಕಡೆ ಹೆಚ್.ಎಲ್.ನಾಗೇಗೌಡರು ‘‘ಶರಾವತಿಯ ನೀರನ್ನು ಉಪಯೋಗಿಸಿ ವಿದ್ಯುತ್ತಿನ ಉತ್ಪನ್ನವನ್ನು ಒಂದೆರಡು ವರ್ಷ ನಿಧಾನ ಮಾಡಿದರೆ ಚಿಂತೆಯಿಲ್ಲ. ಅದರಿಂದ ಆಗುವ ಅನಾಹುತ ಅಂಥ ಹೆಚ್ಚಲ್ಲ. ಆದರೆ ಜಾನಪದವನ್ನು ಉಳಿಸುವ ಕೆಲಸ ಒಂದು ದಿನ ನಿಧಾನ ಮಾಡಿದರೆ ಆಗುವ ಅನಾಹುತ ಅಪಾರ. ಹಾಡುವವರು, ಕುಣಿಯುವವರು ಸತ್ತರೆ ಆ ಕಲೆ ಸತ್ತಂತೆ’’[೨] ಎಂದಿದ್ದಾರೆ. ಆದ್ದರಿಂದಲೆ ಅದನ್ನು ಗಮನಿಸಿ ಅಧ್ಯಯನ ವ್ಯಾಪ್ತಿಗೆ, ಸಂಶೋಧನ ವ್ಯಾಪ್ತಿಗೆ ಒಳಪಡಿಸಬೇಕಾಗುತ್ತದೆ. ಈ ರೀತಿಯ ಸಾಹಿತ್ಯ ಕೆಲಸ ನಡೆಯಬೇಕಾಗುತ್ತದೆ.

ಒಟ್ಟಾರೆಯಾಗಿ ಮರೆಯಾಗಿ ಹೋಗುತ್ತಿದ್ದ ಇತಿಹಾಸ, ಕಲೆ, ಸಾಹಿತ್ಯ, ಸಂಸ್ಕೃತಿ, ನಂಬಿಕೆ, ಆಚರಣೆ, ವಿಶಿಷ್ಟ ವಿಷಯಗಳ ಎಲ್ಲಾ ರೀತಿಯ ಅಂಶಗಳನ್ನು ಸಾಹಿತ್ಯದ ರೂಪದಲ್ಲಿ ಸೆರೆಹಿಡಿದು ಜನಮನದಲ್ಲಿ ಉಳಿಸಬೇಕೆಂಬುದೇ ನನ್ನ ಮೂಲ ಉದ್ದೇಶ. ಗುಬ್ಬಹಳ್ಳಿ ಗ್ರಾಮ ತನ್ನದೆ ಆದ ಇತಿಹಾಸದ ವೈಶಿಷ್ಟ ಮತ್ತು ವಿಶಿಷ್ಟಮಯವಾದ ಸಾಂಸ್ಕೃತಿಕ ವಿಚಾರಗಳನ್ನು ತನ್ನ ಬಸುರಿನಲ್ಲಿ ಹೊತ್ತಿದೆ. ಹೀಗೆ ಈ ಮೇಲಿನ ಎಲ್ಲಾ ಉದ್ದೇಶ ಮತ್ತು ವ್ಯಾಪ್ತಿಯನ್ನು ಈ ನಿಬಂಧ ಒಳಗೊಂಡಿದೆ.

---

೨. ಜಾನಪದ ತುಂಬುಹೊಳೆ– ಡಿ.ಆರ್. ನಾಗರಾಜು, ಪು. ೩೦

**ಭೌಗೋಳಿಕ ಹಿನ್ನೆಲೆ**

'ಭೌಗೋಳಿಕ' ಎಂಬ ಪದಕ್ಕೆ ವಿಸ್ತಾರವಾದ ವ್ಯಾಪ್ತಿಯಿದ್ದು ಇದು ವೈವಿಧ್ಯಮಯವೂ ಮಾನವನ ವಾಸಸ್ಥಳವೂ ಆದ ಭೂಮಿಯ ಅಧ್ಯಯನವಾಗಿದೆ. ಮಂಡ್ಯ ಜಿಲ್ಲೆಯು ಕರ್ನಾಟಕ ರಾಜ್ಯದ ದಕ್ಷಿಣ ಭಾಗದ ಮಧ್ಯದಲ್ಲಿದೆ. ಇದು ಮೈಸೂರು ವಿಭಾಗಕ್ಕೆ ಸೇರಿದ ಜಿಲ್ಲೆಯಾಗಿದ್ದು ರಾಜ್ಯದ ದಕ್ಷಿಣದಲ್ಲಿ ಜಿಲ್ಲೆಯ ಒಟ್ಟು ವಿಸ್ತೀರ್ಣ ೪೯೯೧ ಚದರ ಕಿಲೋಮೀಟರ್‌ಗಳು. ಇದು ದಕ್ಷಿಣ ಮತ್ತು ನೈಋತ್ಯದಲ್ಲಿ ಮೈಸೂರು ಜಿಲ್ಲೆ, ಉತ್ತರದಲ್ಲಿ ತುಮಕೂರು ಜಿಲ್ಲೆ, ಪೂರ್ವದಲ್ಲಿ ಬೆಂಗಳೂರು ಜಿಲ್ಲೆ, ವಾಯವ್ಯದಲ್ಲಿ ಹಾಸನ ಜಿಲ್ಲೆಯಿಂದ ಸುತ್ತುವರಿದಿದೆ. ಈ ಜಿಲ್ಲೆಯಲ್ಲಿ ಏಳು ತಾಲ್ಲೂಕುಗಳಿವೆ. ಕೃಷ್ಣರಾಜಪೇಟೆ, ನಾಗಮಂಗಲ, ಪಾಂಡವಪುರ, ಶ್ರೀರಂಗಪಟ್ಟಣ, ಮಳವಳ್ಳಿ, ಮದ್ದೂರು ಮತ್ತು ಮಂಡ್ಯ. ಈ ಜಿಲ್ಲೆಯಲ್ಲಿ ಹೇಮಾವತಿ, ಕಾವೇರಿ, ಲೋಕಪಾವನಿ, ಶಿಂಷಾ ಮತ್ತು ವೀರವೈಷ್ಣವಿ ಎಂಬ ನದಿಗಳು ಹರಿಯುತ್ತವೆ.

ಕೃಷ್ಣರಾಜಪೇಟೆಯು ೧೯೯೧ರ ವರೆಗೂ ಅತ್ತಿಗುಪ್ಪೆ ಎಂದು ಕರೆಸಿಕೊಳ್ಳುತ್ತಿತ್ತು. ೧೯೯೧ರಲ್ಲಿ ಇದಕ್ಕೆ ಕೃಷ್ಣರಾಜಪೇಟೆ ಎಂದು ಪುನರ್ ನಾಮಕರಣವಾಯಿತು. ಕೃಷ್ಣರಾಜಪೇಟೆ ಕರ್ನಾಟಕ ರಜ್ಯದ ಮಂಡ್ಯ ಜಿಲ್ಲೆಯ ಪಶ್ಚಿಮ ಭಾಗದಲ್ಲಿರುವ ತಾಲ್ಲೂಕು ಕೇಂದ್ರಸ್ಥಳ. ಮಂಡ್ಯ ಜಿಲ್ಲೆಯ ಏಳು ತಾಲ್ಲೂಕುಗಳಲ್ಲಿ ದೊಡ್ಡ ತಾಲ್ಲೂಕು ಕೆ.ಆರ್.ಪೇಟೆ ತಾಲ್ಲೂಕಿನ ಈಶಾನ್ಯ ಪೂರ್ವ ಮತ್ತು ಆಗ್ನೇಯ ದಿಕ್ಕಿನಲ್ಲಿ ನಾಗಮಂಗಲ ಹಾಗೂ ಪಾಂಡವಪುರ ತಾಲ್ಲೂಕು. ದಕ್ಷಿಣ ಹಾಗೂ ನೈಋತ್ಯದಲ್ಲಿ ಮೈಸೂರು ಜಿಲ್ಲೆ, ಉತ್ತರ ಮತ್ತು ವಾಯವ್ಯ ದಿಕ್ಕಿನಲ್ಲಿ ಹಾಸನ ಜಿಲ್ಲೆಯು ಮೇರೆಯಾಗಿ ಸುತ್ತುವರಿದಿದೆ.

"ಕೇ.ಆರ್.ಪೇಟೆ ತಾಲ್ಲೂಕಿನ ಒಟ್ಟು ಭೂವಿಸ್ತೀರ್ಣ ೯೦೪.೪ ಚ.ಕಿ.ಮೀ.ಗಳು ಕೃಷ್ಣರಾಜಪೇಟೆಗೆ ಕೆ.ಆರ್.ಪೇಟೆ ಎಂಬುದು ಸಂಕ್ಷಿಪ್ತ ನಾಮವಾಗಿದೆ. ಮಂಡ್ಯದಿಂದ ೬೦ ಕಿ.ಮೀ. ಪಾಂಡವಪುರ ರೈಲ್ವೆ ನಿಲ್ದಾಣದಿಂದ ೩೩ ಕಿ.ಮೀ. ಮೈಸೂರಿನಿಂದ ೫೭ ಕಿ.ಮೀ.ದೂರದಲ್ಲಿದೆ. ಇದು ಸಮುದ್ರ ಮಟ್ಟದಿಂದ ೨೫೦೦-೩೦೦೦ ಅಡಿಗಳಷ್ಟು ಎತ್ತರದಲ್ಲಿದೆ."[೪]

ಅಕ್ಕಿಹೆಬ್ಬಾಳು ಕೆ.ಆರ್.ಪೇಟೆ ತಾಲ್ಲೂಕಿನ ಪ್ರಮುಖ ಹೋಬಳಿಗಳಲ್ಲಿ ಒಂದಾಗಿದೆ. ಕೆ.ಆರ್.ಪೇಟೆಯಿಂದ ಕೆ.ಆರ್.ನಗರಕ್ಕೆ ಹೋಗುವ ದಾರಿಯಲ್ಲಿ ಕೆ.ಆರ್.ಪೇಟೆಯಿಂದ ಹದಿನಾಲ್ಕು ಕಿ.ಮೀ. ದೂರದಲ್ಲಿದೆ. ಅಕ್ಕಿಹೆಬ್ಬಾಳು ರೈಲ್ವೆನಿಲ್ದಾಣವನ್ನು ಹೊಂದಿದೆ. ಈ ಅಕ್ಕಿಹೆಬ್ಬಾಳು ರೈಲ್ವೆ ನಿಲ್ದಾಣದಿಂದ ಸ್ವಲ್ಪ ದೂರ ಉತ್ತರಕ್ಕೆ ನಡೆದು ನಂತರ ದಕ್ಷಿಣಕ್ಕೆ ತಿರುಗಿ

---

೪. ಕೃಷ್ಣರಾಜಪೇಟೆ ತಾಲ್ಲೂಕು ದಶಿನಿ- ಕೆ. ಕಾಳೇಗೌಡ, ಪು. ೧ ಮತ್ತು ೨

ರೈಲ್ವೆ ಹಳಿಗಳನ್ನು ದಾಟಿ ಈಶಾನ್ಯ ದಿಕ್ಕಿನ ಕಡೆಗೆ ಸ್ವಲ್ಪ ದೂರ ನಡೆದರೆ ಅಲ್ಲಿ ಸಿಗುವುದೇ ದುಡುಕನಹಳ್ಳಿ, ಈ ದುಡುಕನಹಳ್ಳಿಯನ್ನು ಪ್ರವೇಶಿಸಿ ನಂತರ ಈಶಾನ್ಯ ಮುಖವಾಗಿ ನಡೆದರೆ ಅಲ್ಲಿ ಸಿಕ್ಕುವ ಚಿಕ್ಕ ತೊರೆ ಅಥವಾ ಹಳ್ಳ (ಮಳೆಗಾಲದಲ್ಲಿ ತುಂಬಿ ಹರಿಯುತ್ತದೆ)ವನ್ನು ಇಳಿದು ಮೇಲಕ್ಕೆ ಹತ್ತಿದರೆ ಅಲ್ಲಿ ಸಿಗುವುದೇ ಒಂದು ಪುರಾತನ ಮಾವಿನತೋಪು. ಆ ಮಾವಿನ ತೋಪಿನ ಮಧ್ಯದಲ್ಲಿ ಒಂದು ಪುರಾತನ ಪುಟ್ಟ ಗುಡಿ (ದೇವಸ್ಥಾನ)ಯೊಂದು ಇತ್ತು. ಈಗ ಇತ್ತೀಚೆಗೆ ಆ ಗುಡಿಯನ್ನು ಹೊಡೆದು ಹಾಕಿ ಹೊಸದಾಗಿ ಪುಟ್ಟ ದೇವಸ್ಥಾನವನ್ನು ಕಟ್ಟಿದ್ದಾರೆ. ಆ ಗುಡಿಯಲ್ಲಿನ ದೈವದ ಹೆಸರು 'ಉಡಚಲಮ್ಮ' ಎಂದು ಹಾಗಾಗಿ ಅದಕ್ಕೆ 'ಉಡುಚ್ಲಮ್ಮನ ತೋಪು' ಎಂದು ಸಹ ಕರೆಯುತ್ತಾರೆ. ಇಲ್ಲಿ ಸಾಗುವವರು ಸಾಮಾನ್ಯವಾಗಿ ಆ ಉಡುಚ್ಲಮ್ಮನಿಗೆ ಕೈಮುಗಿದು, ಅದೇ ದಾರಿಯಲ್ಲಿ ಈಶಾನ್ಯ ದಿಕ್ಕಿನಲ್ಲೆ ಮುಂದೆ ನಡೆದು ನಂತರ ದಕ್ಷಿಣ ದಿಕ್ಕಿಗೆ ತಿರುಗಿ ನಡೆದರೆ ಅಲ್ಲಿ ಗೋಚರಿಸುವುದೇ 'ಗುಬ್ಬಹಳ್ಳಿ'.

ಅಂದರೆ ಈಗ ನಾನು ತಿಳಿಸುತ್ತಾ ಸಾಗಿ ಬಂದ ಹಾದಿಗೆ ಯಾವುದೇ ಸರಿಯಾದ ರಸ್ತೆ ಇಲ್ಲ. ಸಿಕ್ಕ ಹೊಲ, ಬದುಗಳ ಮೇಲೆ ಕಲ್ಲು, ಮುಳ್ಳುಗಳನ್ನು ಹಾದು ಮಧ್ಯೆ ಮಧ್ಯೆ ಬೇಲಿಗಳ ನಡುವೆ ಕಷ್ಟದಿಂದ ಸಾಗಿ ಬರಬೇಕು. ಹತ್ತಾರು ವರ್ಷಗಳ ಹಿಂದೆ ಸ್ವಲ್ಪ ದಾರಿ ವಿಶಾಲವಾಗಿದ್ದು ಹೆಚ್ಚಿನ ಜನ ತಮ್ಮ ದಿನನಿತ್ಯದ ವ್ಯವಹಾರಗಳಿಗೆ ಇದೇ ಹಾದಿಯಲ್ಲಿ ಓಡಾಡುತ್ತಿದ್ದರಿಂದ ಹೋಗುವವರು ಬರುವವರು ನಡೆದು-ನಡೆದು ಸ್ವಲ್ಪ ಚೆನ್ನಾಗಿ ಸವೆದ ಹಾದಿಯೇ ಆಗಿತ್ತು. ಆದರೆ ಮನುಷ್ಯನ ಸ್ವಾರ್ಥ ಸ್ವಭಾವ ದಿನೇದಿನೇ ಹೆಚ್ಚಾದಂತೆ ಆ ದಾರಿಯ ಅಕ್ಕಪಕ್ಕದ ಹೊಲದವರು ದಾರಿಯನ್ನು ಬಿಡಲು ಇಚ್ಚಿಸದೆ ದಾರಿಯನ್ನು ಒತ್ತುವರಿ (ಬೇಲಿ ಹಾಕಿಕೊಳ್ಳುವ ಮೂಲಕ ಆಕ್ರಮಿಸಿಕೊಳ್ಳುವುದು) ಮಾಡಿಕೊಂಡಿದ್ದರ ಪರಿಣಾಮ ಈಗ ಅದು ಸರಿಯಾಗಿ ಮೊದಲಿನಂತೆ ತನ್ನ ವಿಶಾಲತೆಯನ್ನು ಉಳಿಸಿಕೊಳ್ಳದೆ ಕಿರಿದಾಗಿದೆ. ಹಾಗೂ ಇತ್ತೀಚೆಗೆ ಜನ ಈ ಮಾರ್ಗವಾಗಿ ಆ ಕಿರಿದಾದ ಹಾದಿಯಲ್ಲಿ ನಡೆದಾಡುವುದು ಕಡಿಮೆಯಾದುದ್ದರ ಫಲವಾಗಿ ಅದು ಸವೆದ ಹಾದಿಯಂತೆ ಕಂಡು ಬರುವುದಿಲ್ಲ. ಒಟ್ಟಾರೆ ಇದೊಂದು ಕಠಿಣ ಅಥವಾ ಕ್ಲಿಷ್ಟದ ಹಾದಿಯಾಗಿದೆ. ಹೊಸಬರಿಗೆ ಈ ಹಾದಿಯ ಮೂಲಕ ಸಾಗಿ ಬರುವುದು ಸ್ವಲ್ಪ ಶ್ರಮದಾಯಕವೇ ಸರಿ. ಅಕ್ಕಿಹೆಬ್ಬಾಳು ರೈಲ್ವೆ ನಿಲ್ದಾಣದಿಂದ ಗುಬ್ಬಹಳ್ಳಿಗೆ ಈ ಮಾರ್ಗವಾಗಿ ಸುಮಾರು ನಾಲ್ಕು ಕಿ.ಮೀಟರ್‌ಗಳಷ್ಟು ದೂರವಿರಬಹುದು.

ಎರಡನೆಯ ಹಾದಿ ಎಂದರೆ ಅಕ್ಕಿಹೆಬ್ಬಾಳು ರೈಲ್ವೆನಿಲ್ದಾಣಕ್ಕೆ ದಕ್ಷಿಣ ದಿಕ್ಕಿನ ನೈರುತ್ಯದಲ್ಲಿ ರೈಲ್ವೆನಿಲ್ದಾಣಕ್ಕೆ ಚಾಚಿಕೊಂಡಂತೆಯೇ ಇರುವ ಊರು ಮಾಕನಕೊಪ್ಪಲುಗ್ರಾಮ. ಈ ಮಾಕನಕೊಪ್ಪಲು ಗ್ರಾಮದಿಂದ ಪಶ್ಚಿಮಾಭಿಮುಖವಾಗಿ ನಡೆದರೆ ಸರ್ಕಾರಿ ಕಾಡು ಕಂಡುಬರುತ್ತದೆ. ಸ್ವಲ್ಪ ದೂರ ಡಾಂಬರು ರಸ್ತೆ, ಕಾಡು ಸಿಕ್ಕಿದ ನಂತರ ಉತ್ತರಕ್ಕೆ ಹೊಲಗಳ

ನಡುವಿನ ಕಾಲುಹಾದಿಯಲ್ಲಿ ಸಾಗಿದರೆ ಸ್ವಲ್ಪ ದೂರದ ನಂತರ ಗುಬ್ಬಹಳ್ಳಿಗ್ರಾಮ ಕಂಡುಬರುತ್ತದೆ. ಈ ಹಾದಿ ಮೊದಲು (ಅಂದರೆ ಯಾವಾಗಲೊ) ಇತ್ತಂತೆ, ಜನ ಹೆಚ್ಚಾಗಿ ಆಗ ಓಡಾಡುತ್ತಿದ್ದರಂತೆ. ಆದರೆ ಕಾಲಕ್ರಮೇಣ ಮುಚ್ಚಿಹೋಗಿದ್ದು, ಮತ್ತೆ ಸರ್ಕಾರ ಇತ್ತೀಚೆಗೆ ಈ ಹಾದಿಯನ್ನು ತೆರವುಗೊಳಿಸಿ ಡಾಂಬರೀಕರಣ ಮಾಡಲು ಪ್ರಯತ್ನಿಸುತ್ತಿದೆ. ಅಕ್ಕಿಹೆಬ್ಬಾಳು ರೈಲ್ವೆನಿಲ್ದಾಣದಿಂದ ಈ ಮಾರ್ಗವಾಗಿ ಗುಬ್ಬಹಳ್ಳಿಗೆ ಸುಮಾರು ನಾಲ್ಕು ಕಿ.ಮೀಟರ್‌ಗಳಾಗಬಹುದು.

ಮೂರನೆಯ ಹಾದಿ (ದಾರಿ) ಎಂದರೆ, ಅಕ್ಕಿಹೆಬ್ಬಾಳು ರೈಲ್ವೆ ನಿಲ್ದಾಣದಿಂದ ಉತ್ತರಕ್ಕೆ ಸಾಕ್ಷಿಬೀಡು. ಗ್ರಾಮಕ್ಕೆ ಹೋಗುವ ದಾರಿಯಲ್ಲಿ ನಡೆಯುತ್ತಾ ಸುಮಾರು ಒಂದು ಕಿ.ಮೀಟರ್‌ನಷ್ಟು ದೂರ ಸಾಗಿದರೆ 'ಹೊಸದುಡುಕನಹಳ್ಳಿ' ಗ್ರಾಮ ಸಿಗುತ್ತದೆ. ಹಾಗೆಯೇ ಅದೇ ದಾರಿಯಲ್ಲಿ ಸುಮಾರು ಒಂದು ಕಿ.ಮೀಟರ್‌ನಷ್ಟು ಮುಂದೆ ಸಾಗಿದರೆ ಅಲ್ಲಿ ಒಂದು ರೈಲ್ವೆಗೇಟ್ ಸಿಗುತ್ತದೆ. ಆ ರೈಲ್ವೆಗೇಟನ್ನು ದಾಟಿ ಸ್ವಲ್ಪ ಕತ್ತು ಎತ್ತಿ ಕಣ್ಣು ಹಾಯಿಸಿದರೆ ಅಲ್ಲೇ ಸರ್ಕಾರದವರು ನಿಲ್ಲಿಸಿರುವ ನಾಮಫಲಕದ ಮೇಲೆ 'ಗುಬ್ಬಹಳ್ಳಿ ೧.೫.ಕಿ.ಮೀ' ಎಂದು ಬರೆದಿರುವುದು ಕಾಣಿಸುತ್ತದೆ. ಆ ನಾಮಫಲಕದ ಹಾದಿಯನ್ನೇ ಹಿಡಿದು ಪಶ್ಚಿಮಾಭಿಮುಖವಾದ ಈಶಾನ್ಯಕ್ಕೆ ತಿರುಗಿ ಮತ್ತೆ ಸ್ವಲ್ಪ ಮುಂದೆ ಪಶ್ಚಿಮಕ್ಕೆ ತಿರುಗಿ ನಡೆದರೆ ಅಲ್ಲಿ ಗುಬ್ಬಹಳ್ಳಿ ಕಂಡುಬರುತ್ತದೆ. ಇತ್ತೀಚೆಗೆ ಈ ದಾರಿ ಡಾಂಬರೀಕರಣಗೊಂಡಿದೆ.

ಇನ್ನು ನಾಲ್ಕು ಮತ್ತು ಐದನೆಯ ಹಾದಿ ಎಂದರೆ ಸಾಕ್ಷಿಬೀಡು ಗ್ರಾಮದಿಂದ ಸುಮಾರು ಎರಡು ಕಿ.ಮೀಟರ್‌ನಷ್ಟು ದೂರ ಪಶ್ಚಿಮಾಭಿಮುಖವಾಗಿ ನಡೆದರೆ ಅಲ್ಲಿ ದಕ್ಷಿಣಕ್ಕೆ ತಿರುಗಿದ ದಾರಿ ಕಂಡು ಬರುತ್ತದೆ. ಆ ದಕ್ಷಿಣ ಭಾಗದ ದಾರಿಯಲ್ಲಿ ಸ್ವಲ್ಪ ಮುಂದೆ ಸಾಗಿದರೆ ಅಲ್ಲಿ ಗುಬ್ಬಹಳ್ಳಿ ಗ್ರಾಮ ಕಂಡುಬರುತ್ತದೆ. ಈಗ ಹೇಳಿದ ದಕ್ಷಿಣಕ್ಕೆ ತಿರುಗುವ ದಾರಿ ಅಂದರೆ ಸಾಕ್ಷಿಬೀಡು ಗ್ರಾಮದಿಂದ ಬಂದೆವಲ್ಲ ಅದೇ ದಾರಿಯಲ್ಲಿ ದಕ್ಷಿಣಕ್ಕೆ ತಿರುಗದೆ (ತಿರುಗಿದರೆ ಗುಬ್ಬಹಳ್ಳಿಗ್ರಾಮ) ಅದೇ ದಾರಿ ಅದು ಈಶಾನ್ಯ ದಿಕ್ಕಿಗೆ ತಿರುಗಿದೆ. ಆ ದಾರಿಯಲ್ಲಿ ಮುಂದೆ ಸಾಗಿದರೆ ಇನ್ನು ಮುಂದೆ ಸಿಗುವುದೇ ಹಂಗರಮುದ್ದನಹಳ್ಳಿ ಎಂಬ ಗ್ರಾಮ. ಹೀಗೆ ಸಾಕ್ಷಿಬೀಡಿನಿಂದ ಬರುವುದು ನಾಲ್ಕನೆಯ ದಾರಿಯಾದರೆ, ಹಂಗರಮುದ್ದನಹಳ್ಳಿಯಿಂದ ಸಂಪರ್ಕ ಕಲ್ಪಿಸುವುದು ಐದನೆಯ ದಾರಿಯಾಗಿದೆ. ಈ ಎರಡೂ ಹಾದಿಗಳಲ್ಲಿಯೂ ಸ್ವಲ್ಪ ಜನರು ವಿರಳವಾಗಿಯೆ ನಡೆದಾಡುತ್ತಾರೆ.

ಮತ್ತೆ ಆರನೆಯ ಅಥವಾ ಕೊನೆಯ ಹಾದಿ ಎಂದರೆ ಕೆ.ಆರ್.ನಗರ ಮತ್ತು ಹೊಳೆನರಸೀಪುರ ದಾರಿಯ ಮಧ್ಯದಲ್ಲಿ ಅಂದರೆ ಭೇರ್ಯ (ಇದು ಊರು ಮತ್ತು ಸರ್ಕಲ್) ದಿಂದ ಸ್ವಲ್ಪ ಮುಂದೆ ದೊಡ್ಡಹಳ್ಳಿ ಎಂಬ ಗ್ರಾಮ ಸಿಗುತ್ತದೆ. ಇಲ್ಲಿ ಪ್ರತಿ ಗುರುವಾರದ ದಿನ ಜನಗಳ ಮತ್ತು ದನಗಳ ಸಂತೆ ಜೋರಾಗಿ ನಡೆಯುತ್ತದೆ.

ಸುತ್ತಮುತ್ತಲ ಗ್ರಾಮಗಳಿಂದ ಇಲ್ಲಿಗೆ ಸಂತೆ ಸಾಮಾನು ಮಾರಲು ಮತ್ತು ಕೊಳ್ಳಲು ಹಾಗೂ ದನಕರುಗಳನ್ನು ಮಾರಲು ಮತ್ತು ಕೊಳ್ಳಲು ಹೆಚ್ಚಿನ ವ್ಯಾಪಾರಸ್ಥರು ಮತ್ತು ಜನರು ಹೆಚ್ಚಾಗಿ ಸೇರುತ್ತಾರೆ. ಈ ದೊಡ್ಡಹಳ್ಳಿಗ್ರಾಮ ಅಥವಾ ಸಂತೆ ಕಟ್ಟುವ ಜಾಗ ಸ್ವಲ್ಪ ಎತ್ತರದ ಪ್ರದೇಶದಲ್ಲಿ ಇರುವುದರಿಂದ ಸಾಮಾನ್ಯವಾಗಿ ಜನರು ಈ ಸಂತೆಯನ್ನು 'ಬೋರೆಸಂತೆ' ಎಂದೇ ಕರೆಯುತ್ತಾರೆ. ಈ ಬೋರೆಸಂತೆಯಿಂದ ಪೂರ್ವಕ್ಕೆ ನೇರವಾಗಿ ಒಂದು ರಸ್ತೆ ಇದೆ. ಈ ರಸ್ತೆಯಲ್ಲಿ ಸುಮಾರು ಎರಡು ಕಿ.ಮೀಟರ್‌ನಷ್ಟು ಸಾಗಿದರೆ 'ಗುಳುವಿನತ್ತಿಗುಪ್ಪೆ' ಎಂಬ ಗ್ರಾಮ ಸಿಗುತ್ತದೆ. ಮತ್ತೆ ಈ ಗುಳುವಿನ ಅತ್ತಿಗುಪ್ಪೆ ಗ್ರಾಮದಿಂದ ಸುಮಾರು ಒಂದು ಕಿ.ಮೀಟರ್‌ನಷ್ಟು ಮುಂದೆ ಸಾಗಿ ನಂತರ ಎದುರಾಗುವ ಕಾಡಿನಲ್ಲಿ ಉತ್ತರಕ್ಕೆ ತಿರುಗಿದ ಕಾಲುದಾರಿಯಲ್ಲಿ ಕಾಡಿನ ಒಳಗೆ ನಡೆದು ನಂತರ ಪೂರ್ವ ದಿಕ್ಕಿಗೆ ಅದೇ ದಾರಿಯಲ್ಲಿ ಮುಂದೆ ಸಾಗಿದರೆ ಅಲ್ಲಿಗೆ ಗುಬ್ಬಹಳ್ಳಿ ಸಿಕ್ಕಿದಂತೆಯೇ. ಈ ಬೋರೆಸಂತೆ ಅಥವಾ ದೊಡ್ಡಹಳ್ಳಿಗ್ರಾಮದಿಂದ ಗುಬ್ಬಹಳ್ಳಿಗೆ ಸುಮಾರು ನಾಲ್ಕೈದು ಕಿ.ಮೀಟರ್‌ಗಳು ಆಗಬಹುದು. ಈ ದಾರಿಯಲ್ಲಿ ಗುರುವಾರ ಸಂತೆಗೆ ಹೋಗುವ ಬರುವ ಜನ ಸ್ವಲ್ಪ ಓಡಾಡಿದಂತೆ ಕಂಡರೂ ಇನ್ನು ಉಳಿದ ದಿನಗಳಲ್ಲಿ ವಿರಳತೆಯೇ ಕಂಡುಬರುತ್ತದೆ.

ಒಟ್ಟಾರೆ ಈ ಎಲ್ಲಾ ದಾರಿಗಳನ್ನು ನಾವು ಗಮನಿಸಿದಾಗ ಇದ್ದುದರಲ್ಲಿ ಸೂಕ್ತವಾದ ಹಾಗೂ ಹೆಚ್ಚು ಜನರು ಓಡಾಡುವ ಹಾದಿ ಎಂದರೆ ಮೊದಲು ಹೇಳಿದ ಮೂರನೆಯ ಹಾದಿ. ಅಂದರೆ ಅಕ್ಕಿಹೆಬ್ಬಾಳು ರೈಲ್ವೆನಿಲ್ದಾಣಕ್ಕೂ ಸಾಕ್ಷಿಬೀಡಿಗೂ ಮಧ್ಯೆ ಸಿಗುವ ರೈಲ್ವೆ ಗೇಟಿನ ಬಳಿ ಕಾಣುವ ನಾಮಫಲಕ 'ಗುಬ್ಬಹಳ್ಳಿ ೧.೫. ಕಿ.ಮೀ' ಎಂಬ ಆ ರಸ್ತೆ ಇತ್ತೀಚೆಗೆ ಡಾಂಬರೀಕರಣ ಗೊಂಡಿದ್ದು ಸಾಮಾನ್ಯವಾಗಿ ಹೆಚ್ಚಾಗಿ ಜನರು ತಮ್ಮ ದಿನನಿತ್ಯದ ವ್ಯವಹಾರಗಳಿಗೆ ಈ ದಾರಿಯಲ್ಲಿಯೇ ಓಡಾಡುವುದು ಕಂಡು ಬರುತ್ತದೆ. ಒಟ್ಟಾರೆ ಈ ಗುಬ್ಬಹಳ್ಳಿಗ್ರಾಮ ಸರ್ಕಾರಿ ಬಸ್ (ಖಾಸಗಿ ಬಸ್‌ಗಳ ಸಂಚಾರ ಇಲ್ಲಿ ಇರುವುದಿಲ್ಲ)ಗಳ ಸೇವೆ, ಸೌಲಭ್ಯ ಹಾಗೂ ಸಂಪರ್ಕದಿಂದ ವಂಚಿತವಾಗಿದೆ.

ಈ ಗುಬ್ಬಹಳ್ಳಿ ಗ್ರಾಮದ ಪೂರ್ವ ದಿಕ್ಕಿನಲ್ಲಿ ಹೊಸಗದ್ದೆಗ್ರಾಮ (ಈಗ ಈ ಊರು ಇಲ್ಲ ಹಿಂದೆ ಇತ್ತಂತೆ) ಮತ್ತು ಸಾಕ್ಷಿಬೀಡುಗ್ರಾಮಗಳು ಇರುತ್ತವೆ. ಪಶ್ಚಿಮ ದಿಕ್ಕಿನಲ್ಲಿ ಕೆ.ಆರ್.ನಗರ ತಾಲ್ಲೂಕಿಗೆ ಸೇರಿದ ಗುಳುವಿನ ಅತ್ತಿಗುಪ್ಪೆಗ್ರಾಮ ಇದೆ. ಉತ್ತರ ದಿಕ್ಕಿನಲ್ಲಿ ಹಂದಿಬೀಕನಹಳ್ಳಿಗ್ರಾಮ ಇದೆ. ದಕ್ಷಿಣದಿಕ್ಕಿನಲ್ಲಿ ಮಠದ ಕಾವಲುಗಡಿ ಇದೆ. ಇಲ್ಲಿ ಮರಕಟ್ಟೆ (ಒಂದು ಚಿಕ್ಕಕೆರೆ ಅಥವಾ ಕಟ್ಟೆ) ಕಂಡುಬರುತ್ತದೆ. ಇದು ಮೊದಲು ಮಠದಕಟ್ಟೆಯಾಗಿದ್ದು, ಈಗ ಜನಸಾಮಾನ್ಯರ ಆಡುಭಾಷೆಯಲ್ಲಿ ಮರ್‌ಕಟ್ಟೆಯಾಗಿದೆ.

ಇನ್ನು ಗುಬ್ಬಹಳ್ಳಿ ಆಗ್ನೇಯ ದಿಕ್ಕಿನಲ್ಲಿ ದುಡುಕನಹಳ್ಳಿಗ್ರಾಮ, ನೈಋತ್ಯ ದಿಕ್ಕಿನಲ್ಲಿ ಗವಿಗುಡಿ ಅಥವಾ ಗವಿಮಠ ಮತ್ತು ಕಾವಲುಹೊಸೂರು ಗ್ರಾಮ, ವಾಯವ್ಯ ದಿಕ್ಕಿನಲ್ಲಿ ಹಂಗರಮುದ್ದನಹಳ್ಳಿ ಗ್ರಾಮ ಮತ್ತು ಈಶಾನ್ಯ ದಿಕ್ಕಿನಲ್ಲಿ ಅರೆಹಳ್ಳಿಗ್ರಾಮದ ಗಡಿಭಾಗ ಕಂಡುಬರುತ್ತದೆ.

ಗುಬ್ಬಹಳ್ಳಿಗ್ರಾಮದ ದಕ್ಷಿಣಭಾಗದಿಂದ ಹಿಡಿದು ಪಶ್ಚಿಮ ಭಾಗವೂ ಸೇರಿದಂತೆ ಉತ್ತರಭಾಗದಲ್ಲಿರುವ ಹಂದಿಬೀಕನಹಳ್ಳಿಯವರೆಗೂ ಹುಣಸೂರು ಉಪವಿಭಾಗಕ್ಕೆ ಸೇರಿದ ಅರಣ್ಯ ಪ್ರದೇಶ ಸುಮಾರು ಹನ್ನೆರಡು ಸಾವಿರ ಹೆಕ್ಟೇರ್ ಭೂವಿಸ್ತೀರ್ಣ ಉಳ್ಳದ್ದಾಗಿದೆ. ಈ ಅರಣ್ಯ ಗುಬ್ಬಹಳ್ಳಿಯನ್ನು ಸುತ್ತುವರೆದಂತೆ ಕಂಡುಬರುತ್ತದೆ. ಈ ಕಾಡು ಮಂಡ್ಯ, ಮೈಸೂರು ಮತ್ತು ಹಾಸನ ಈ ಮೂರು ಜಿಲ್ಲೆಗಳಿಗೂ ಸೇರಿದ್ದಾಗಿದೆ.

ಈ ಗುಬ್ಬಹಳ್ಳಿ ಪ್ರದೇಶವು ಮರಳು ಮಿಶ್ರಿತ ಕೆಂಪು ಮಣ್ಣಿನಿಂದ ಕೂಡಿದೆ. ಕೆಲವು ಕಡೆ ಜೇಡಿಮಣ್ಣಿನ ಪ್ರದೇಶವಿದೆ. ಮೊದೆ ಕುರುಚಲು ಗಿಡಗಳಿಂದ ಹಾಗೂ ಬೇವಿನಮರ, ಗಂಧದಮರಗಳು, ಹಲಸಿನಮರಗಳು, ಮಾವಿನಮರಗಳು, ಚುಜ್ಜಲಿಮರಗಳು, ಜಾಲಿಮರಗಳು ಮೊದಲಾದವುಗಳಿಂದ ಕೂಡಿದೆ. ಗುಬ್ಬಹಳ್ಳಿಗೆ ಹೊಂದಿಕೊಂಡಂತಿರುವ ಕಾಡಿನಲ್ಲಿ ನೀಲಗಿರಿಮರಗಳು, ಕರಂಟಿ (ಹರ್ಕ್ಯುಲೆಸ್) ಮರಗಳು, ಶ್ರೀಗಂಧದ ಮರಗಳು ಕಂಡುಬರುತ್ತವೆ, ಈ ಅರಣ್ಯದಲ್ಲಿ ಪ್ರಾಣಿಸಂಪತ್ತು ಅಧಿಕವಾಗಿದ್ದು ಕಾಡುಹಂದಿಗಳು, ತೋಳಗಳು, ಗುಳ್ಳೆನರಿಗಳು, ಮೊಲಗಳು, ನವಿಲುಗಳು ಅಲ್ಲಲ್ಲಿ ವಿರಳವಾಗಿ ಜಿಂಕೆಗಳು ಕಂಡುಬರುತ್ತವೆ.

ಗುಬ್ಬಹಳ್ಳಿ ಪ್ರದೇಶಕ್ಕೆ ಮುಂಗಾರು ಮತ್ತು ಹಿಂಗಾರು ಮಾರುತಗಳಿಂದ ಮತ್ತು ಏಪ್ರಿಲ್‌ನಿಂದ ನವೆಂಬರ್‌ವರೆಗೆ ನೈಋತ್ಯ ಮಾರುತಗಳಿಂದ ಮಳೆಯಾಗುವುದು, ಅಕ್ಟೋಬರ್ ತಿಂಗಳಿನಲ್ಲಿ ಹೆಚ್ಚು ಮಳೆಯಾಗುತ್ತದೆ. ಮಾರ್ಚ್‌ನಿಂದ ಮೇ ತಿಂಗಳವರೆಗೆ ಉಷ್ಣಾಂಶ ಹೆಚ್ಚಾಗಿರುತ್ತದೆ. ಬೇಸಿಗೆಯಲ್ಲಿ ಸಾಮಾನ್ಯ ಉಷ್ಣಾಂಶವಿದ್ದು, ಮಳೆಗಾಲದಲ್ಲಿ ಸಮಪ್ರಮಾಣದ ಮಳೆ ದಾಖಲಾದ ನಿರೂಪಣೆಗಳಿವೆ. ಚಳಿಗಾಲದಲ್ಲಿ ವಿಪರೀತ ಚಳಿ ಇರುತ್ತದೆ. ಇಲ್ಲಿನ ಋತುಮಾನವನ್ನು ಜೂನ್‌ನಿಂದ ಸೆಪ್ಟೆಂಬರ್‌ವರೆಗೆ ಮಳೆಗಾಲವೆಂದೂ, ಮಾರ್ಚ್‌ನಿಂದ ಮೇ ವರೆಗೆ ಬೇಸಿಗೆಕಾಲವೆಂದು ವಿಮಗಡಿಸಬಹುದು.

ಇಲ್ಲಿನ ವಾರ್ಷಿಕ ಮಳೆಯ ಪ್ರಮಾಣ ಏಳುನೂರ ಐವತ್ತು ಮಿ.ಮೀ.ಗಳು ಜೂನ್‌ನಿಂದ ಮಳೆಗಾಲ ಆರಂಭವಾಗುತ್ತದೆ. ಈ ಪ್ರದೇಶಕ್ಕೆ ನೈಋತ್ಯ ಮಾನ್‌ಸೂನ್ ಮಾರುತಗಳು ಬೀಸಿ ಅರೆಬಯಲು ಪ್ರದೇಶದಲ್ಲಿ ಉಳುಮೆ ಆರಂಭವಾಗುತ್ತದೆ. ಈ ಪ್ರದೇಶವು ಹಿಂಗಾರು ಮತ್ತು ಮುಂಗಾರು ಮಾರುತಗಳೆರಡಕ್ಕೂ ಒಳಪಟ್ಟಿದೆ.

ಗುಬ್ಬಹಳ್ಳಿ ಹಾಗೂ ಸುತ್ತಮುತ್ತಲ ಪ್ರದೇಶಗಳಿಗೆ ನೀರಾವರಿ ಸೌಲಭ್ಯ ಒದಗಿಸಲು ಹೇಮಾವತಿ ಮೈನರ್ ೩ನೇ ಡಿಸ್ಟ್ರಿಮೆಂಟ್ ವದುವಿನ ನಾಲೆಯ ಕಾಮಗಾರಿ ನಡೆಯುತ್ತಲಿದ್ದು, ಈ ಕಾಲುವೆಯಲ್ಲಿ ನೀರು ಸರಬರಾಜು ಆದರೆ ಗುಬ್ಬಹಳ್ಳಿಯ ಬಹುತೇಕ ಹೆಚ್ಚಿನ ಪ್ರದೇಶವೆಲ್ಲ ನೀರಾವರಿ ಭೂಮಿಯೆ ಆಗುತ್ತದೆ. ಈಗ ಸದ್ಯದಲ್ಲಿ ಗುಬ್ಬಹಳ್ಳಿಯಲ್ಲಿ ಸಾಮನ್ಯವಾಗಿ ಕಂಡುಬರುವ ಬೆಳೆಗಳೆಂದರೆ ಭತ್ತ, ರಾಗಿ, ಕಬ್ಬು, ಎಳ್ಳು, ಹಲಸಂದೆ ಹಾಗೂ ಹುರುಳಿ ಬೆಳೆಗಳು ಕಂಡಬರುತ್ತವೆ. ಇತ್ತೀಚೆಗೆ ಆರ್ಥಿಕತೆಯ ದೃಷ್ಟಿಯಿಂದ ತಂಬಾಕು (ಹೊಗೆಸೊಪ್ಪು) ಬೆಳೆಯನ್ನು ಅಲ್ಲಲ್ಲಿ ಬೆಳೆಯುತ್ತಿರುವುದು ಕಂಡುಬರುತ್ತದೆ.

**ಗುಬ್ಬಹಳ್ಳಿಯ ಭೌಗೋಳಿಕತೆಯನ್ನು ಮುಂದಿನ ಪುಟದಲ್ಲಿನ ನಕಾಶೆಯ ಮೂಲಕ ನೊಡಬಹುದಾಗಿದೆ.**

ಗುಬ್ಬಹಳ್ಳಿಯ ಭೌಗೋಳಿಕ ಅಂಶಗಳನ್ನು ಅರಿತ ನಾವು ಈಗ ಅದರ ಐತಿಹಾಸಿಕ ವಿಷಯದತ್ತ ಪರಾಮರ್ಶಿಸಬೇಕಾಗಿದೆ. ಇತಿಹಾಸವೆಂದರೆ 'ಹೀಗೆ ಇತ್ತು' ಎಂದು ಹೇಳುತ್ತಾ ವೇದಗಳು, ಪುರಾಣಗಳು, ಉಪನಿಷತ್ತು, ಭಗವದ್ಗೀತೆ ಮುಂತಾದವುಗಳಲ್ಲಿ ಇತಿಹಾಸದ ಕೆಲವು ಒಳನೋಟಗಳು ನೋಡಸಿಗುತ್ತವೆ. ಇತಿಹಾಸದ ಆಧಾರಗಳನ್ನು ತಿಳಿಯಲು ಅಲ್ಲಿ ದೊರೆಯುವಂತಹ ಸ್ಥಿತ್ಯ ಮಹಿತಿಗಳನ್ನು ಆಧರಿಸಿ ಐತಿಹಾಸಿಕ ನೆಲೆಗಳನ್ನು ನಿರ್ಧರಿಸಬೇಕಾಗುತ್ತದೆ. ಅದೇ ರೀತಿ ಗುಬ್ಬಿಹಳ್ಳಿಯ ಇತಿಹಾಸವನ್ನು ಪ್ರಯತ್ನ ಪೂರ್ವಕವಾಗಿ ತಿಳಿಯಪಡಿಸತ್ತೇನೆ.

"ಸುಮಾರು ಕ್ರಿ.ಶ. ೧೮೭೮ರಲ್ಲಿ ಬ್ರಿಟಿಷ್ ಸೈನ್ಯದ ಒಂದು ತುಕಡಿ (ಗುಂಪು) ಪಕ್ಕದ ಊರಾದ ಸಾಕ್ಷಿಬೀಡಿನಲ್ಲಿ ಬೀಡುಬಿಟ್ಟಿದ್ದು, ಅವರ ಅಧಿಕಾರಿಯೊಬ್ಬರು ಫಿರಂಗಿಯಿಂದ ಮದ್ದು ಸಿಡಿಸಿದರಂತೆ, ಆ ಮದ್ದು ತಗುಲಿದ ಗುಬ್ಬಚ್ಚಿಯೊಂದು ಈ ಸ್ಥಳದಲ್ಲಿ (ಈಗಿನ ಗುಬ್ಬಿಹಳ್ಳಿ) ಪ್ರಾಣಬಿಟ್ಟಿತು. ಅದನ್ನು ಹುಡುಕಿಕೊಂಡು ಬಂದ ಸೈನಿಕರು ಗುಬ್ಬಚ್ಚಿಯನ್ನು ನೋಡಿ 'ಗುಬ್ಬಿಬೀಡು' ಎಂದು ಕರೆದರಂತೆ. ಅದೇ ಕಾಲಾನಂತರದಲ್ಲಿ 'ಹಳ್ಳಿ' ಎಂಬ ಪದ ಸೇರ್ಪಡೆಯಾಗಿ 'ಗುಬ್ಬಿಹಳ್ಳಿ'ಯಾಯಿತು ಎಂದು ಹೇಳುತ್ತಾರೆ".

ಇನ್ನೊಂದು ಅಂಶವೆಂದರೆ "ಹಿಂದೆ ಎಂದೋ ಒಂದು ಕಾಲದಲ್ಲಿ ಸರ್ಕಾರಿ ಅಧಿಕಾರಿಗಳು ಈ ಗ್ರಾಮಕ್ಕೆ ಭೇಟಿ ಇತ್ತಾಗ ಇಲ್ಲಿಯ ಜನರನ್ನು ಕೆಲವು ಮಾಹಿತಿಗಳನ್ನು ಕೇಳಿದರಂತೆ ಅದಕ್ಕೆ ಅಲ್ಲಿಯ ಜನ ಗಾಬರಿಯಿಂದ ಹೆದರಿ ಮುದುರಿಕೊಂಡರಂತೆ. ಅದನ್ನು ಕಂಡು ಬಂದಿದ್ದ ಅಧಿಕಾರಿಗಳು ಇವರ ಭಯಬೀತ ಗಾಬರಿಯನ್ನು ಕಂಡು ಗುಬ್ಬಿಯಂತೆ ಪರದಾಡುತ್ತಾರೆ ಎಂದರಂತೆ. ಈ ಕಾರಣದಿಂದ ಈ ಊರಿಗೆ 'ಗುಬ್ಬಹಳ್ಳಿ' ಎಂಬ ಹೆಸರು ಬಂತು ಎಂದು ಹೇಳುತ್ತಾರೆ."

ಮತ್ತೊಂದು ಅಂಶವೆಂದರೆ, ಹಲವು ವರ್ಷಗಳ ಹಿಂದೆ ಈ ಊರಿನ ಕೆರೆಯ ಬಳಿ ಇರುವ ದೇವೀರಮ್ಮನ ಗುಡಿಯ ಬಳಿ ಕೆಲವು ಕುಟುಂಬಳು ಅಲ್ಲಿ ಬೀಡುಬಿಟ್ಟು ವಾಸಮಾಡಲು ಪ್ರಾರಂಭಿಸಿದರಂತೆ. ಆಗ ಆ ಸುತ್ತಮುತ್ತಲಿನ ಪ್ರದೇಶ ಇಂದಿಗಿಂತ ಹೆಚ್ಚು ದಟ್ಟವಾದ ಕಾಡಿನಿಂದ ಕೂಡಿದ್ದು ರಾತ್ರಿ ಹೊತ್ತಿಲ್ಲದ ಹೊತ್ತಿನಲ್ಲಿ ಗೂಬೆಗಳು ಕೂಗುತ್ತಿದ್ದವಂತೆ. ಈ ಕಾರಣದಿಂದಾಗಿ 'ಗೂಬೆಹಳ್ಳಿ' ಎಂಬ ಹೆಸರು ಬಂದು, ಅದೇ ಕಾಲಾನಂತರದಲ್ಲಿ ಜನಸಾಮಾನ್ಯರ ಭಾಷೆಯಲ್ಲಿ 'ಗುಬ್ಬಹಳ್ಳಿ'ಯಾಯಿತು ಎಂದು ಹೇಳುತ್ತಾರೆ."

ಒಟ್ಟಾರೆ ನಾವು ಈ ಮೂರು ಅಂಶಗಳನ್ನು ಪರಿಶೀಲಿಸಿದಾಗ ಈ ಗ್ರಾಮ ತನ್ನ ಹೆಸರಿಗೆ ಐತಿಹಾಸಿಕ ಹಾಗೂ ಜನಪದ ಎರಡು ಅಂಶಗಳನ್ನು ಪಡೆದುಕೊಂಡಿದೆ ಎಂದು ತಿಳಿದುಬರುತ್ತದೆ. ಸತ್ಯಕ್ಕೆ ಹತ್ತಿರವಾದ ಸಂಗತಿಯನ್ನು ನಾನು ಸೂಕ್ಷ್ಮವಾಗಿ ಪರಿಶೀಲಿಸಿದಾಗ

ಗೂಬೆಹಳ್ಳಿಯೇ ಜನಸಮಾನ್ಯರ ಆಡುಭಾಷೆಯಲ್ಲಿ ಗುಬ್ಬಹಳ್ಳಿಯಾಗಿದೆ ಎಂದು ಹೇಳಬಹುದಾಗಿದೆ. ಕಾರಣ ಗೂಬೆ-ಗುಬ್ಬಿ ಎಂಬ ಎರಡು ಪದಗಳಿಗೆ ಅಂತಹ ಹೆಚ್ಚಿನ ವ್ಯತ್ಯಾಸವೇನು ಕಂಡು ಬರಲಾರದು. ಹಾಗೂ ಅಂದು ನಾನು ಸಂದರ್ಶನ ನಡೆಸುತ್ತಿದ್ದ ಸಂದರ್ಭದಲ್ಲಿ ಇಲ್ಲಿನ ಗ್ರಾಮಸ್ಥರು ''ನಾವು ಕಂಡಂತೆ ಇಲ್ಲಿ ಹೆಚ್ಚು ಗೂಬೆಗಳು ಇದ್ದು ಕೂಗುತ್ತಿದ್ದವೆಂದು, ಇತ್ತೀಚೆಗಷ್ಟೆ ಗೂಬೆಗಳ ಸಂಖ್ಯೆ ಕಡಿಮೆಯಾಗಿದೆ''ಯೆಂದು ಹೇಳಿದರು. ಮತ್ತೊಂದು ಕಾರಣವೆಂದರೆ 'ಗೂಬೆ ಅಪಶಕುನದ ಪಕ್ಷಿ' ಎಂಬ ನಂಬಿಕೆ ಜನಸಾಮಾನ್ಯರದಲ್ಲಿದ್ದು ಅದರಿಂದ 'ಗೂಬೆಹಳ್ಳಿ' ಎಂದು ಕರೆಯಲು ಇಷ್ಟಪಡದ ಜನರು 'ಗುಬ್ಬಹಳ್ಳಿ'[೫] ಎಂದು ಕರೆದಿರಬೇಕು. ಆದ್ದರಿಂದ ನನಗೆ ಅನ್ನಿಸಿದಂತೆ ಈ ಗೂಬೆಹಳ್ಳಿಯೇ ಗುಬ್ಬಹಳ್ಳಿಯಾಗಿ ಇಂದಿನ ದಿನಗಳಲ್ಲಿ ಮತ್ತೂ ಮುಂದುವರೆದು 'ಹ' ಕಾರದ ಪ್ರಯೋಗ ಬಿಟ್ಟು ಹೋಗಿ 'ಗುಬ್ಬಳ್ಳಿ, ಗುಬ್ಬಳ್ಳಿ' ಎಂದು ಜನರ ಬಾಯಲ್ಲಿ ಉಚ್ಚಾರಣೆಯನ್ನು ಪಡೆದುಕೊಂಡಿದೆ.

---

೫. ಕರ್ನಾಟಕ ಗ್ರಾಮ ಸೂಚಿ- ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಪು. ೨೦೫

## ಅಧ್ಯಾಯ ಮೂರು

# ಗುಬ್ಬಹಳ್ಳಿಯ ದೇವಾಲಯಗಳು, ಉತ್ಸವಗಳು ಮತ್ತು ಹಬ್ಬಗಳು

ದೇವಾಲಯಗಳು, ಉತ್ಸವಗಳು ಮತ್ತು ಹಬ್ಬಗಳು ಸಾಮಾಜಿಕ ಜನಪದರ ಸಂಪ್ರದಾಯಗಳು. ಅವು ತಮಗೆ ವಿಶಿಷ್ಟವಾದ ಅರ್ಥಪೂರ್ಣ ಮೂಲದಿಂದ ತಮ್ಮ ಹುಟ್ಟನ್ನು ಪಡೆದುಕೊಂಡಿರುತ್ತವೆ. ಈ ಹುಟ್ಟು ಇಂದು ನೆನ್ನೆಯದಲ್ಲ. ಧಾರ್ಮಿಕ ಹುಟ್ಟಿನೊಂದಿಗೆ ದೇವಾಲಯ ಉತ್ಸವ, ಹಬ್ಬಗಳ ಹುಟ್ಟು ಆಗಿದೆ. ಇವು ಭಯದ ಮೂಲದಿಂದ ಕಲ್ಪಿತವಾಗಿದ್ದಾಗಿರಬಹುದು. ಇಲ್ಲವೆ ಮಾನವನ ಸಹಜ ಹೊಂದಾಣಿಕೆಯ ಪ್ರವೃತ್ತಿಯಿಂದ ಜನಿಸಿದ್ದಿರಬಹುದು. ಆದರೆ ಪ್ರತಿಯೊಂದು ಆಚರಣೆಯು ತನ್ನ ವ್ಯಾಪ್ತಿಯಲ್ಲಿ ಕಾಲ ಸಂದರ್ಭಗಳ ಹಿನ್ನೆಲೆಯಲ್ಲಿ ಅರ್ಥಪೂರ್ಣ ಉನ್ನತಿಯನ್ನು ಪಡೆದುಕೊಂಡಿರುತ್ತದೆ. ಸಮಾಜ ಬದಲಾದಂತೆ ಒಂದು ಕಾಲಕ್ಕೆ ಅರ್ಥಪೂರ್ಣವಾದ ಆಚರಣೆಗಳು ಮತ್ತೊಂದು ಕಾಲಕ್ಕೆ ಅರ್ಥಹೀನವಾಗಿ ಕಂಡರೂ ಅವು ಬದುಕಿದ್ದಷ್ಟು ಕಾಲ ಕ್ರಿಯಾಶೀಲವಾಗಿರುತ್ತವೆ. ಹೀಗೆ ಅನಾದಿಕಾಲದಲ್ಲಿ ಹುಟ್ಟಿಕೊಂಡ ಆಚರಣೆಗಳು ಉತ್ಸವಗಳಾಗಿ ಹಬ್ಬಗಳೆನಿಸಿಕೊಂಡವು.

'ಹಬ್ಬ' ಎಂಬುದು 'ಪರ್ವನ್' ಎಂಬ ಶಬ್ದದ ತದ್ಭವ ರೂಪ. 'ಪರ್ವ' ಎಂದರೆ 'ಕಾಲ ವಿಭಜನೆ' ಎಂದರ್ಥ. ತಿಂಗಳ ಮೊದಲ ಅವಧಿಯಲ್ಲಿ ಚಂದ್ರನಲ್ಲಿ ಉಂಟಾಗುವ ನಾಲ್ಕು ಬದಲಾವಣೆಗಳ ಕಾಲ. ಈ ಇಚ್ಛೆಯ ಪೂರ್ಣತೆಗಾಗಿ ನಿರ್ಧಿಷ್ಟ ಅವಧಿಯಲ್ಲಿ ಬಲಿ ಅಥವಾ ಎಡೆಕೊಡುವ ಆಚರಣೆ ಒಂದು ವಿಧ. ಸಾಮಾನ್ಯವಾಗಿ ಈ ಹಬ್ಬ ಎಂಬುದು ಕೌಟುಂಬಿಕ ಜೀವನಕ್ಕೆ ಸೀಮಿತವಾಗಿದ್ದು ತದನಂತರದಲ್ಲಿ ಆಯಾಪ್ರದೇಶ, ಸ್ಥಳಗಳಿಗೆ ಸಾರ್ವತ್ರಿಕವಾಗಿರಬಹುದು.

ಉತ್ಸವದಂತೆ ಹಬ್ಬವೂ ಕೂಡ ಒಂದು ನಿರ್ದಿಷ್ಟ ಕಾಲದಲ್ಲಿ ನಡೆಯುವ ಆಚರಣೆಯಾಗಿದೆ. ಹೀಗೆ ಆದಿಮಾನವರಲ್ಲಿ ಪ್ರಾಕೃತಿಕ ವಿಸ್ಮಯಗಳ ಬಗ್ಗೆ ಉಂಟಾದ ಭಯವೇ ಧಾರ್ಮಿಕ ವಿಧಿ. ಆಚರಣೆಗಳಿಗೆ ನಾಂದಿ ಹಾಡಿತು. ಹೀಗೆ ದೇವಾಲಯಗಳು, ಉತ್ಸವಗಳು ಹಾಗೂ ಹಬ್ಬಗಳ ಪರಿಕಲ್ಪನೆ ಬೆಳೆದುಬಂದಿರಬಹುದು. ಬಸವಣ್ಣನವರು ತಮ್ಮ ವಚನವೊಂದರಲ್ಲಿ ಹೀಗೆ ಹೇಳುತ್ತಾರೆ.

> ''ಉಳ್ಳವರು ಶಿವಾಲಯವ ಮಾಡುವರು:
>
> ನಾನೇನ ಮಾಡುವೆ? ಬಡವನಯ್ಯಾ
>
> ಎನ್ನ ಕಾಲೇ ಕಂಭ, ದೇಹವೇ ದೇಗುಲ
>
> ಸಿರ ಹೊನ್ನ ಕಳಸವಯ್ಯಾ

ಕೂಡಲಸಂಗಮದೇವ, ಕೇಳಯ್ಯಾ
ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ"[೬]

ಹೀಗೆ ಬಸವಣ್ಣನವರು ಈ ಮೇಲಿನ ವಚನದಲ್ಲಿ ದೇವಾಲಯಗಳ ಬಗ್ಗೆ ಪ್ರಸ್ತಾಪಮಾಡುತ್ತಾ, ಕಲ್ಲು, ಮಣ್ಣುಗಳಿಂದ ಕಟ್ಟಿದ ಭೌತ್ತಿಕ ದೇವಾಲಯ ಎಂದಾದರೊಂದು ದಿನ ನಾಶವಾಗುವಂಥದ್ದು. ಆದರೆ ಬೌದ್ಧಿಕವಾಗಿ ತನ್ನ ಮನದಲ್ಲಿ ಅಥವಾ ಹೃದಯದಲ್ಲಿ ಕಟ್ಟಿದ ದೇವಾಲಯ ಶಾಶ್ವತವಾದಂಥದ್ದು ಎಂದು ಹೇಳುತ್ತಾರೆ. ಆದರೆ ಇದು ಜನಸಾಮಾನ್ಯರಿಗೆ ಅರ್ಥವಾಗಿಲ್ಲವೆಂದಲ್ಲ. ಅವರು ತಮ್ಮ ದಿನನಿತ್ಯದ ವ್ಯವಹಾರ, ಜಂಜಾಟಗಳಿಂದ ನೆಮ್ಮದಿ ಪಡೆಯುವ ಸಲುವಾಗಿ, ಸ್ವಲ್ಪ ಸಮಯವಾದರೂ ಮಾನಸಿಕವಾಗಿ ನೆಮ್ಮದಿ ಸಿಗುವ ಸ್ಥಳ, ಅದು ದೇವಾಲಯ ಎಂದು ಅಂದಿನ ದಿನಗಳಲ್ಲೇ ದೇವಾಲಯಗಳ ಹುಟ್ಟಿಗೆ ನಾಂದಿ ಆಡಿರಬಹುದು. ಒಟ್ಟಾರೆ ಅಂದಿನಿಂದ ಇಂದಿನವರೆಗೆ ದೇವಾಲಯಗಳು ಸಮಾಜದ ಅವಿಭಾಜ್ಯ ಅಂಗಗಳೇ ಆಗಿ ಬೆಳೆದುಬಂದಿವೆ. ಹಾಗೆಯೇ ಇಂದಿಗೂ ಬೆಳೆಯುತ್ತಲೇ ಇವೆ. ಈ ನಿಟ್ಟಿನಲ್ಲಿ ಅಧ್ಯಯನದ ವಿಷಯವಾದ ಗುಬ್ಬಹಳಿಯ ದೇವಾಲಯಗಳು, ಉತ್ಸವಗಳನ್ನು ಈ ಕೆಳಕಂಡಂತೆ ನೋಡಬಹುದಾಗಿದೆ.

**ಮಾರಮ್ಮನ ದೇವಾಲಯ**



**ಗುಬ್ಬಹಳ್ಳಿಯ ಮಾರಮ್ಮ ದೇವಾಲಯದ ಒಂದು ದೃಶ್ಯ**

ನಾವು ಗುಬ್ಬಹಳ್ಳಿಯನ್ನು ಪ್ರವೇಶಿಸುತ್ತಿದ್ದಂತೆ ನಮಗೆ ಕಂಡುಬರುವ ಮೊದಲ ದೇವಸ್ಥಾನವೆಂದರೆ ಅದು ಮಾರಮ್ಮನಗುಡಿ. ಈ ಮಾರಿಗುಡಿಯ ಬಲ ಮತ್ತು ಎಡಪಾರ್ಶ್ವಗಳೆರಡರಲ್ಲೂ ಒಂದೊಂದು ವೀರಗಲ್ಲುಗಳು ಕಂಡುಬರುತ್ತವೆ. ಸಾಮಾನ್ಯವಾಗಿ

೬. ಕಾವ್ಯಸಂಚಯ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ ಪು. ೨೩

ಎಲ್ಲಾ ವೀರಗಲ್ಲುಗಳಮತೆ ಈ ವೀರಗಲ್ಲುಗಳು ಮೂರು ಭಾಗಗಳನ್ನು ಹೊಂದಿದ್ದು, ಕೆಳಭಾಗದಲ್ಲಿ ವೀರನ ಪರಾಕ್ರಮದ ಹೋರಾಟದ ಚಿತ್ರವಿದ್ದರೆ, ಮಧ್ಯದ ಭಾಗದಲ್ಲಿ ಮಡಿದ ವೀರನನ್ನು ದೇವಧೂತರು ಪಲ್ಲಕ್ಕಿಯಲ್ಲಿ ಕೊಂಡೊಯ್ಯುವ ಚಿತ್ರವಿದೆ. ಮೂರನೇ ಭಾಗವಾದ ಮೇಲ್ಭಾಗದಲ್ಲಿ ಆ ಮಡಿದ ವೀರನು ದೇವರ ಅಂದರೆ ಶಿವಲಿಂಗದ ಸನ್ನಿಧಿಯಲ್ಲಿರುವ ಚಿತ್ರ ಕಂಡುಬರುತ್ತದೆ. ಈ ವೀರಗಲ್ಲುಗಳಲ್ಲಿ ಯಾವುದೇ ಬರವಣಿಗೆಯಾಗಲಿ, ಲಿಪಿಯಾಗಲಿ ಕಂಡುಬರುವುದಿಲ್ಲ. ಈ ವೀರಗಲ್ಲುಗಳ ಬಗ್ಗೆ ಗ್ರಾಮಸ್ಥರನ್ನು ವಿಚಾರಿಸಿದಾಗ ಅವರು ತಮಗೆ ಅವುಗಳ ಬಗ್ಗೆ ಏನು ಗೊತ್ತಿಲ್ಲ ಎನ್ನುತ್ತಾರೆ. ಇನ್ನು ದೇವಾಲಯಕ್ಕೆ ಹೊಂದಿಕೊಂಡಂತೆ ಇರುವ ಬಲಭಾಗದಲ್ಲಿ (ದೇವಾಲಯದ ಒಂದು ಭಾಗವೆ) 'ಗುಬ್ಬಹಳ್ಳಿ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ' ಇದೆ.



**ಮಾರಮ್ಮನ ಉದ್ಭವ ವಿಗ್ರಹದ ದೃಶ್ಯ**

ಈ ಗ್ರಾಮದ ಮಾರಿದೇವತೆ ಪೂರ್ವ ದಿಕ್ಕಿಗೆ ಮುಖ ಮಾಡಿದೆ. ಇದು ಉದ್ಭವಮೂರ್ತಿ ಎಂದು ಇಲ್ಲಿಯ ಜನ ಹೇಳುತ್ತಾರೆ. 'ಮಾರಮ್ಮನವಾರ ಮಂಗಳವಾರ' ಎಂಬ ಪ್ರತೀತಿಯೊಂದಿದೆ. ಆದ್ದರಿಂದ ವಾರದ ಏಳೂ ದಿನಗಳು ಸೇರಿದಂತೆ, ಮಂಗಳವಾರ ವಿಶೇಷವಾಗಿ ಈ ಮಾರಮ್ಮನ ಮೂರ್ತಿಗೆ ಪೂಜೆಸಲ್ಲಿಸುತ್ತಾರೆ.

ಪ್ರತಿವರ್ಷ ಯುಗಾದಿಹಬ್ಬದ ಹಿಂದಿನ ವಾರದಲ್ಲಿ ಮಾರಿಹಬ್ಬವನ್ನು ಆಚರಿಸುತ್ತಾರೆ. ಇಲ್ಲಿ ಯಾವುದೇ ರೀತಿಯ ಪ್ರಾಣಿ ಹಿಂಸೆಯಾಗಲಿ ಅಥವಾ ವಧೆಯಾಗಲಿ ನಡೆಯುವುದಿಲ್ಲ. ಅವರೆಕಾಳು, ಉರುಳಿಕಾಳುಗಳನ್ನು ಬೇಯಿಸಿ, ತಂಬಿಟ್ಟು ಮಾಡಿ ಇವುಗಳನ್ನು ನೈವೇದ್ಯಕ್ಕೆ ಇಡುತ್ತಾರೆ. ತೆಂಗಿನಕಾಯಿ, ಬಾಳೆಹಣ್ಣು, ಎಲೆ, ಅಡಿಕೆ, ಗಂಧದಕಟ್ಟಿ, ಕರ್ಪೂರಗಳಿಂದ ದೇವಿಯನ್ನು ಭಯಭಕ್ತಿಯಿಂದ ಪೂಜಿಸುತ್ತಾರೆ. ಹರಿಷಿಣ-ಕುಂಕುಮಗಳನ್ನು ದೇವಿಗೆ ಅಚ್ಚಿರುತ್ತಾರೆ. ದೇವಿ ತಂಪಾಗಲೆಂದು ಅಥವಾ ಶಾಂತವಾಗುತ್ತಾಳೆಂಬ ನಂಬಿಕೆಯಿಂದ ಮಾರಮ್ಮನ ವಿಗ್ರಹಕ್ಕೆ ಅರಳೆಣ್ಣೆ ಅಚ್ಚುವ ಸಂಪ್ರದಾಯ ರೂಢಿಯಲ್ಲಿದೆ.

"ಈ ಕೆಲವು ವರ್ಷಗಳ ಹಿಂದೆ ಈ ರೀತಿಯಾಗಿ ಮಾರಮ್ಮನ ಪೂಜೆ ನಡೆಯುವ ಸಂದರ್ಭದಲ್ಲಿ, ಗ್ರಾಮದ ಚಿಕ್ಕ ಚಿಕ್ಕ ಹುಡುಗರು ಕಾಚ್ಚಿಕಡ್ಡಿಗೆ ಬಟ್ಟೆ ಸುತ್ತಿ ಅದನ್ನು ಎಣ್ಣೆಯಿಂದ ನೆನೆಸಿ, ಅನಂತರ ಅದಕ್ಕೆ ಬೆಂಕಿ ಅಚ್ಚಿ, ಹೀಗೆ ಪಂಜು ಮಾಡಿಕೊಂಡು ದೇವಿಯ ಪೂಜೆಯ ಸಂದರ್ಭದಲ್ಲಿ ನಿಲ್ಲುತ್ತಿದ್ದರು. ಈಗ ಇತ್ತೀಚಿನ ವರ್ಷಗಳಲ್ಲಿ ಈ ಪಂಜು ಹಿಡಿದು ನಿಲ್ಲುವ ಸಂಪ್ರದಾಯ ನಿಂತುಹೋಗಿದೆ". ಈ ದೇವರಿಗೆ ಪೂಜಾರರು ನಾಯಕ ಜನಾಂಗಕ್ಕೆ ಸೇರಿದ ಕೃಷ್ಣನಾಯಕ ಎಂಬುವವರು. ಇವರಿಗೆ ೪೬ ವರ್ಷ ವಯಸ್ಸು. ನಾನು ಚಿಂತಿಸಿದಂತೆ ಪಂಜು ಬೆಳಕಿನ ಸಂಕೇತ, ನಮ್ಮೂರಿನ ಕತ್ತಲೆಯಂತಹ ಕಷ್ಟಗಳನ್ನು ಕಳೆದು, ಬೆಳಕು ನೀಡು ಅಂದರೆ ಒಳ್ಳೆಯದು ಮಾಡು ತಾಯಿ ಎಂದಿರಬೇಕು. ಈ ಮಾರಮ್ಮನ ದೇವಾಲಯದ ಮುಂಭಾಗದ ಎಡಭಾಗದಲ್ಲಿ 'ತಲೆಪೊಟ್ರಯ್ಯ' ಎಂಬ ದೇವರೊಂದಿದೆ.

**ತಲ್‌ಪೊಟ್ರಯ್ಯ**



**ಹುಲ್ಲಿನ ನಡುವೆ ಕಾಣುತ್ತಿರುವ ಬಿಳಿಯ ಬಣ್ಣದ ಆಕಾರವೇ ತಲ್‌ಪೊಟ್ರಯ್ಯ**

ಹಸಿರು ಹುಲ್ಲಿನ ನಡುವೆ ಕಾಣುತ್ತಿರುವ ಬೀಲಿಯ ಬಣ್ಣದ ಆಕಾರವೆ ತಲ್‌ಪೊಟ್ರಯ್ಯ. ಈ ತಲ್‌ಪೊಟ್ರಯ್ಯ ಎಂಬ ದೇವರು ಮಾರಿಗುಡಿಯ ಮುಂಭಾಗದ ಎಡಭಾಗದಲ್ಲಿ ವರ್ಷವಿಡೀ ಮಣ್ಣಿನಿಂದ ಮುಚ್ಚಿಹೋಗಿರುತ್ತದೆ. ಈ ತಲ್‌ಪೊಟ್ರಯ್ಯ ದೇವರು ಒಂದು ಕಲ್ಲಿನ ಉದ್ಭವಮೂರ್ತಿ ಎಂದು ಇಲ್ಲಿಯ ಜನ ಹೇಳುತ್ತಾರೆ. ಇದಕ್ಕೆ ವರ್ಷದಲ್ಲಿ ಒಂದೇ ಒಂದು ಬಾರಿ ಪೂಜೆಸಲ್ಲಿಸುತ್ತಾರೆ. "ಪ್ರತಿವರ್ಷ ಯುಗಾದಿಹಬ್ಬದ ಹಿಂದಿನ ವಾರದಲ್ಲಿ ಮಾರಿಹಬ್ಬವನ್ನು ಆಚರಿಸುವಾಗ, ಮಣ್ಣಿನಲ್ಲಿ ಹುದುಗಿ ಹೋಗಿರುವ ಈ ಕಲ್ಲಿನ ಮೂರ್ತಿಯನ್ನು ಸ್ವಚ್ಛಗೊಳಿಸಿ ತಲ್‌ಪೊಟ್ರಯ್ಯನಿಗೆ ಅಂದು ವಿಶೇಷವಾಗಿ ಪೂಜೆಸಲ್ಲಿಸುತ್ತಾರೆ."

ಈ ತಲ್‌ಪೊಟ್ರಯ್ಯ ದೇವರಿಗೆ ಪೂಜಾರರು ಮಡಿವಾಳ ಜನಾಂಗಕ್ಕೆ ಸೇರಿದವರಾದ ಚೆನ್ನಶೆಟ್ಟಿ ಎಂಬುವರು, ಇವರಿಗೆ ಸುಮಾರು ಐವತ್ತು ವರ್ಷ ವಯಸ್ಸು. ಈ ದೇವರಿಗೆ ಪೂಜೆ ಸಲ್ಲಿಸಲು ಬಂದ ಭಕ್ತರಿಗೆ, ಪೂಜೆಯಾದ ನಂತರ, ಈ ಪೂಜಾರರು ಬೇವಿನಸೊಪ್ಪನ್ನು ಅರಳೆಣ್ಣೆಗೆ ಅಜ್ಜಿ ಭಕ್ತರ ತಲೆಯ ಮೇಲೆ ಸವರುತ್ತಾರೆ. ಇದು ಇಲ್ಲಿಯ ವಿಶೇಷ. ಇದಕ್ಕೆ ಕಾರಣವೇನೆಂದು ನಾನು ಚಿಂತಿಸಿದ್ದಕ್ಕೆ ಹೊಳೆದ ಸಂಗತಿಯೆಂದರೆ, ಭಕ್ತರ ಕಷ್ಟಗಳು ತಲೆಯ ಮೇಲಿನ ಹೊರೆಯಂತಿದ್ದು ಅವು ಕೆಳಗಿಳಿಯಲಿ ಎಂದಿರಬಹುದು.

ಗುಬ್ಬಹಳ್ಳಿಯ ಮತ್ತೊಂದು ದೇವಸ್ಥಾನವೆಂದರೆ ಬಸವೇಶ್ವರನ ಗುಡಿ.



**ಬಸವೇಶ್ವರನ ಗುಡಿಯ ಒಂದು ದೃಶ್ಯ**

ಈ ಬಸವೇಶ್ವರ ದೇವರಿಗೆ ಪ್ರತಿ ಸೋಮವಾರದ ದಿನ ಪೂಜೆ ನಡೆಯುತ್ತದೆ ಹಾಗೂ ಯುಗಾದಿ ಹಬ್ಬ ಹಾಗೂ ಕಾರ್ತಿಕಮಾಸದಲ್ಲಿ ವಿಶೇಷ ಪೂಜೆ ನಡೆಯುತ್ತದೆ. ಈ ದೇವರ ಕಲ್ಲಿನ ವಿಗ್ರಹವಿದ್ದು ಇದನ್ನು ಕಾರ್ತಿಕಮಾಸದಲ್ಲಿ ಈ ವಿಗ್ರಹವನ್ನು ಪಲ್ಲಕ್ಕಿಯಲ್ಲಿ ಹೊತ್ತು ಊರಿನ ಪ್ರಮುಖ ಬೀದಿಗಳಲ್ಲಿ ಹೊತ್ತು ಪೂಜಿಸುತ್ತಾ ಮೆರವಣಿಗೆ ಮಾಡುತ್ತಾರೆ.



**ಬಸವೇಶ್ವರ ದೇವರುಗಳ ವಿಗ್ರಹದ ದೃಶ್ಯ**

ಈ ಬಸವೇಶ್ವರ ಹಬ್ಬದ ವಿಶೇಷವೆಂದರೆ, "ವಿಶೇಷವಾಗಿ ಯುಗಾದಿಹಬ್ಬದ ದಿನ ಸಾಯಂಕಾಲ ಸುಮಾರು ನಾಲ್ಕು ಗಂಟೆಯಿಂದ ಆರು ಗಂಟೆಯ ಒಳಗೆ 'ಹುನ್ನಾರು' ಕಟ್ಟುತ್ತಾರೆ. ಈ ಗ್ರಾಮದಲ್ಲಿ ಯಾರ ಯಾರ ಮನೆಗಳಲ್ಲಿ ದನಕರುಗಳು ಇರುತ್ತವೆಯೊ ಅವರೆಲ್ಲಾ ಮನೆಗೊಂದು ಏರ್ ಕಟ್ಟುತ್ತಾರೆ. ಈ ಸಂದರ್ಭದಲ್ಲಿ ದನಕರುಗಳನ್ನು ಶುಭ್ರವಾಗಿ ತೊಳೆದು, ಸುಂದರವಾಗಿ ಅಲಂಕರಿಸಿ, ಹಾಗೆಯೇ ನೇಗಿಲು, ನೊಗಗಳನ್ನು ತೊಳೆದು, ಅವುಗಳಿಗೆಲ್ಲ ಪೂಜೆಮಾಡಿ, ಊರಿನ ಸುತ್ತ ಹೊನ್ನಾರು (ಮುಂಗಾರಿನಲ್ಲಿ ಮಾಡುವ ಮೊದಲನೆಯ ಉಳುಮೆ) ಉಳುತ್ತಾರೆ. ಹೀಗೆ ಹಲವಾರು ಏರ್‌ಗಳು ಈ ಸಂದರ್ಭದಲ್ಲಿ ಊರಿನ ಸುತ್ತ ನೇಗಿಲಿನ ಗೆರೆಯನ್ನು ಎಳೆಯುವುದರ ಮೂಲಕ ಆ ವರ್ಷದ ಉಳುಮೆಗೆ ಅಂದು ಚಾಲನೆ ಪ್ರಾರಂಭವಾಗುತ್ತಿತ್ತು. ಆದರೆ ಇತ್ತೀಚಿನ ದಿನಗಳಲ್ಲಿ ಊರಿನ ಸುತ್ತಮುತ್ತ ಕಾಲುವೆಯ ಕೆಲಸ ನಡೆಯುತ್ತಿರುವುದರಿಂದ ಊರಿನ ಸುತ್ತ ಉಳಲು ಆಗದೆ, ಈ ದೇವರಿಗೆ ಸೇರಿದೆ ನಾಲ್ಕು ಎಕರೆ ಜಮೀನಿದ್ದು ಅದರ ಸುತ್ತಲೂ 'ಹೊನ್ನಾರು' ಎಂದು ಮೂರು ಸುತ್ತು ಉಳುತ್ತಾರೆ"

ಈ ಬಸವೇಶ್ವರ ದೇವರಿಗೆ ಒಬ್ಬರು ನಿಗದಿತ ಪೂಜಾರರು ಇರುವುದಿಲ್ಲ. ಸಾಮಾನ್ಯವಾಗಿ ಪ್ರತಿವರ್ಷ ಅಥವಾ ಮೂರು ವರ್ಷಗಳಿಗೊಮ್ಮೆ ದೇವರಿಗೆ ಸೇರಿದ ಜಮೀನನ್ನು ಹರಾಜು ಮಾಡುತ್ತಾರೆ. ಆ ಹರಾಜಿನಿಂದ ಬಂದ ಹಣವನ್ನು ಲಿಂಗಾಯಿತ ಜನಾಂಗಕ್ಕೆ ಸೇರಿದ ಯಾರಾದರೂ ಒಬ್ಬರು ಪೂಜೆಮಾಡಲು ಸಿದ್ದರಿರುವವರಿಗೆ ಕೊಟ್ಟುಬಿಡುತ್ತಾರೆ. ಹೀಗೆ ಬಸವೇಶ್ವರ ಈ ಊರಿನ ಒಂದು ಪ್ರಮುಖ ದೇವರಾಗಿದೆ.

ಗುಬ್ಬಹಳ್ಳಿ ಗ್ರಾಮದ ಗ್ರಾಮದೇವತೆ **ದೇವೀರಮ್ಮ ಅಥವಾ ಕೆರೆಕೋಡಮ್ಮ.**



**ಗುಬ್ಬಹಳ್ಳಿ ಗ್ರಾಮದೇವತೆ ದೇವೀರಮ್ಮ ಅಥವಾ ಕೆರೆಕೋಡಮ್ಮನ ದೇವಸ್ಥಾನ**

ಈ ಗುಬ್ಬಹಳ್ಳಿ ಗ್ರಾಮದ ಪ್ರಮುಖ ದೇವತೆ ಅಥವಾ ಗ್ರಾಮದೇವತೆ ಈ ದೇವೀರಮ್ಮ ತಾಯಿ. ಈ ದೇವೀರಮ್ಮನ ದೇವಸ್ಥಾನ ಕೆರೆಗೆ ಸೇರಿಕೊಂಡಂತೆ ಅಥವಾ ಹೊಂದಿಕೊಂಡಂತೆ ಕೆರೆಕೋಡಿಯ ಸಮೀಪವೇ ಇರುವುದರಿಂದ ಈ ದೇವೀರಮ್ಮನಿಗೆ 'ಕೆರೆಕೋಡಮ್ಮ' ಎಂಬ ಹೆಸರು ಬಂದಿದೆ. ಸಾಮಾನ್ಯವಾಗಿ ದೇವೀರಮ್ಮ ಎಂಬ ಹೆಸರಿಗಿಂತ ಕೆರೆಕೋಡಮ್ಮ ಎಂಬ ಹೆಸರೆ ಇತ್ತೀಚಿನ ದಿನಗಳಲ್ಲಿ ಹೆಚ್ಚು ಪ್ರಚಲಿತದಲ್ಲಿದೆ. ಈ ದೇವಿ ಸಸ್ಯಹಾರಿ. ಪಕ್ಕದ ಊರಾದ ಸಾಕ್ಷಿಬೀಡಿನಲ್ಲಿ ವಾಸವಿರುವ ಲಿಂಗಾಯಿತ ಜನಾಂಗಕ್ಕೆ ಸೇರಿದ ವೀರಭದ್ರ ಎಂಬುವವರು ಈ ದೇವರಿಗೆ ಪೂಜಾರರಾಗಿದ್ದಾರೆ. ವರ್ಷದಲ್ಲಿ ದೀಪಾವಳಿ, ಯುಗಾದಿ ಮತ್ತು ಶಿವರಾತ್ರಿ ಹಬ್ಬಗಳಲ್ಲಿ ಪೂಜೆ ಸಲ್ಲಿಸುತ್ತಾರೆ.



**ದೇವೀರಮ್ಮ ಅಥವಾ ಕೆರೆಕೋಡಮ್ಮನ ಉದ್ಭವ ವಿಗ್ರಹ**

## ಉತ್ಸವ

ಆಷಾಡಮಾಸದ ಹಿಂದಿನ ವಾರ ಅಂದರೆ ಜೂನ್ ತಿಂಗಳಿನ ಹತ್ತನೇ ದಿನಾಂಕದ ಒಳಗೆ ದೇವಿಯ ಉತ್ಸವ ನಡೆಯುತ್ತದೆ. ಈ ಗ್ರಾಮದ ಲಿಂಗಾಯಿತ ಜನಾಂಗದವರಲ್ಲಿ ಎರಡು ವಠಾರಗಳೆಂಬ ಬಗೆಗಳಿವೆ. ಅದರಲ್ಲಿ ಒಂದು 'ಚನ್ನೇಗೌಡರವಠಾರ'. ಇದರಲ್ಲಿ ಇಪ್ಪತ್ತು ಮನೆಗಳು ಸೇರ್ಪಡೆಯಾಗುತ್ತವೆ. ಮತ್ತೊಂದು 'ಹೆಬ್ಬಾಗಲಹಟ್ಟಿವಠಾರ' ಎಂದು. ಇದರಲ್ಲಿ ನಲವತ್ತು ಮನೆಗಳು ಸೇರುತ್ತವೆ.

''ಈ ದೇವಿ ಇಡೀ ಗ್ರಾಮಕ್ಕೆ ಆರಾಧ್ಯದೇವತೆ. ಅದರಲ್ಲೂ ವಿಶೇಷವಾಗಿ ಹೆಬ್ಬಾಗಿಲವಠಾರದವರಿಗೆ ದೇವೀರಮ್ಮ ಆರಾಧ್ಯದೈವ. ಅಂದು ಉತ್ಸವದ ಸಂದರ್ಭದಲ್ಲಿ ಇದೇ ವಠಾರಕ್ಕೆ ಸೇರಿದ ಋತುಮತಿಯಾಗದ ಹೆಣ್ಣುಮಗಳ ತಲೆಯ ಮೇಲೆ ದೇವರನ್ನು ಹೊರಿಸಿಕೊಂಡು, ಕಳಸಕನ್ನಂಗಾಡಿಯ ಮೇಲೆ ಆ ದೇವಿಯನ್ನು ಸರ್ವಾಲಂಕಾರ ಭೂಷಿತಳಾಗಿ, ವಾದ್ಯಗೋಷ್ಠಿ, ಬಿರುಸುಬಾಣ, ಮದ್ದುಗುಂಡುಗಳ ಮೂಲಕ ಸುಮಾರು ನಾಲ್ಕು ಕಿ.ಮೀ. ದೂರದಲ್ಲಿರುವ ಹೇಮಾವತಿ ನದಿಗೆ ತೆಗೆದುಕೊಂಡು ಹೋಗುತ್ತಾರೆ. ಅಲ್ಲಿ ಆ ದೇವರನ್ನು ಪಕ್ಕದ ಗ್ರಾಮದ ಆಲೇನಹಳ್ಳಿಯ ನಯನಕ್ಷತ್ರಿಯ ಜನಾಂಗಕ್ಕೆ ಸೇರಿದ ಬಸವಯ್ಯ ಎಂಬುವವರು ನದಿಯಲ್ಲಿ ದೇವರ ವಿಗ್ರಹವನ್ನು ತೊಳೆದು (ದೇವಿಯ ಬೆಳ್ಳಿಯ ಪ್ರಭಾಲೆಗೆ ಚಿನ್ನದ ಜಡೆಬಿಲ್ಲೆ, ಓಲೆ, ತಾಳಿ ಮೊದಲಾದ ಒಡವೆಗಳನ್ನು ಧರಿಸುತ್ತಾರೆ) ಅಲಂಕರಿಸುತ್ತಾರೆ ಹಾಗೂ ಚಿನ್ನದ ಒಡವೆಗಳನ್ನು ತೊಡಿಸಿ ಶೃಂಗರಿಸುತ್ತಾರೆ''

ತದನಂತರ ಮತ್ತೆ ಲಿಂಗಾಯಿತ ಜನಾಂಗದವರು ದೇವಿಯನ್ನು ಮಡಿ(ಶುದ್ಧ) ಮಾಡಿಕೊಳ್ಳುತ್ತಾರೆ. ಅಲ್ಲಿಂದ ಬಂದ ದೇವಿಯ ಉತ್ಸವ ಗುಬ್ಬಹಳ್ಳಿ ಗ್ರಾಮದ ಮುಂಭಾಗದಲ್ಲಿ ನಿಲ್ಲುತ್ತದೆ. ಇಲ್ಲಿ ದೇವಿಗೆ 'ದೂಳ್‌ಮರಿ' ಎಂದು ಒಂದು ಕುರಿಯನ್ನೊ ಅಥವಾ ಮೇಕೆಯನ್ನೊ ಬಲಿಕೊಡುತ್ತಾರೆ. ಇಲ್ಲಿ ಆ ಪ್ರಾಣಿಯನ್ನು ಕೊಲ್ಲುವವನು ಮಡಿವಾಳ ಜನಾಂಗಕ್ಕೆ ಸೇರಿದ ಚೆನ್ನಶೆಟ್ಟಿ ಎಂಬುವರು. ದೇವೀರಮ್ಮ ಸಸ್ಯಹಾರಿ ಎಂದು ಮೊದಲೇ ಹೇಳಲಾಗಿದ್ದರೂ ಇಲ್ಲಿ ಬಲಿಯ ಪ್ರಸ್ತಾಪ ಮಾಡಲಾಗಿದೆ. ಕಾರಣವೇನೆಂದರೆ, ಗ್ರಾಮದೇವತೆ ಕೆರೆಕೋಡಮ್ಮ ಸಸ್ಯಹಾರಿಯೇ ಆದರೂ ಆಕೆಯ ಸೇವಕರು, ಬಂಟರು ಅಥವಾ ದೂತರು ಮಾಂಸಹಾರಿಗಳಂತೆ, ಆದ್ದರಿಂದ ಅವರಿಗೆ ಈ ಪ್ರಾಣಿಯ ಬಲಿ ಎಂದು ಹೇಳುತ್ತಾರೆ. ಆದ್ದರಿಂದ ಇದು ದೂತರಿಗೆ ಅರ್ಪಿಸುವ ಮರಿ (ಪ್ರಾಣಿ)ಯಾದ್ದರಿಂದ 'ದೂತರಮರಿಯಾಗಿದ್ದು' ಜನರ ಆಡುಭಾಷೆಯಲ್ಲಿ 'ದೂಳ್‌ಮರಿ'ಯಾಗಿದೆ.

''ಇಲ್ಲಿ ಊರಿನ ಜನರೆಲ್ಲಾ ಒಟ್ಟಾಗಿ ಊರಿನ ಮುಂದೆ ದೇವಿಗೆ ಒಂದೇ ಜಾಗದಲ್ಲಿ ಗಂಧದ ಧೂಪ ಹಾಕುತ್ತಾರೆ. ಈ ಸಂದರ್ಭದಲ್ಲಿ ಈ ಊರ ಮುಂದಿನ ಪ್ರದೇಶವೆಲ್ಲಾ ಧೂಮ (ಹೊಗೆ)ದಿಂದ ತುಂಬಿ ಹೋಗಿರುತ್ತದೆ. ಈ ಮೊದಲೆ ಅರಿಕೆ

ಮಾಡಿಕೊಂಡವರೆಲ್ಲಾ ತಮ್ಮ ಇಷ್ಟಾರ್ಥ ಸಿದ್ಧಿಸಲೆಂದು ಹೂವಿನ ಹಾರಗಳನ್ನು ದೇವಿಗೆ ಅರ್ಪಿಸುತ್ತಾರೆ."

"ಇಲ್ಲಿಂದ ಮುಂದಕ್ಕೆ ದೇವಿಯ ಮೆರವಣಿಗೆ ಊರಿನ ರಾಜಬೀದಿಗೆ ಬರುತ್ತದೆ. ಇಲ್ಲಿ ಪ್ರತಿ ಮನೆಯ ಗಂಡಸರು ಒಂದೊಂದು ಈಡುಗಾಯಿ ಹೊಡೆಯುತ್ತಾರೆ. ಈ ಈಡುಗಾಯಿ ಹೊಡೆಯುವ ವಿಶೇಷವೆಂದರೆ, ಬಹಳ ಹಿಂದೆ ಈ ರೀತಿ ದೇವಿಯ ಉತ್ಸವ ಬಂದಾಗ ಇಲ್ಲಿ ಅನೇಕ ಕುರಿ, ಮೇಕೆಗಳನ್ನು ಬಲಿಕೊಡುತ್ತಿದ್ದರಂತೆ, ಆದರೆ ನಂತರದ ದಿನಗಳಲ್ಲಿ ಅದನ್ನು ತಪ್ಪಿಸಿದಕ್ಕೆ ಪ್ರತಿಯಾಗಿ ಈಡುಗಾಯಿ ಹಾಕುವ ಸಂಪ್ರದಾಯ ರೂಢಿಗೆ ಬಂದಿದೆ. ಇದರಿಂದ ಆಗುತ್ತಿದ್ದ ಪ್ರಾಣಿ ಬಲಿ ಅಥವಾ ಹಿಂಸೆಯನ್ನು ತಪ್ಪಿಸಿದಂತಾಗಿದೆ. ಈ ಸಂದರ್ಭದಲ್ಲಿ ಇಲ್ಲಿ ಬಾಣಬಿರುಸುಗಳ, ಗುಂಡುಸಿಡಿಮದ್ದುಗಳ ಪ್ರದರ್ಶನ ಸುಮಾರು ಒಂದು ಗಂಟೆಯವರೆಗೂ ದೇವಿಯ ಎದುರಿನಲ್ಲಿ ನಡೆಯುತ್ತದೆ."

ಈ ದೇವಿಯ ಉತ್ಸವ ಊರಿನ ಪ್ರತಿಬೀದಿಯಲ್ಲೂ ಬರುವುದರಿಂದ ಪ್ರತಿಮನೆಯವರು ಅವರವರ ಮನೆಯ ಬಳಿ ಬಂದಾಗ ಈಡುಗಾಯಿ ಹೊಡೆದ ನಂತರವೇ ಊಟ ಮಾಡುತ್ತಾರೆ. ಅಲ್ಲಿವರೆಗೂ ಉಪವಾಸವಿರುತ್ತಾರೆ. ಹಾಗೂ ಮನೆಗೆ ಬಂದ ನೆಂಟರಿಷ್ಟರಿಗೂ ಊಟ ಬಡಿಸಿರುವುದಿಲ್ಲ. ಏನಿದ್ದರೂ ಈಡುಗಾಯಿ ಹೊಡೆದ ನಂತರವೇ ಊಟದ ಕಾರ್ಯಕ್ರಮ.

ಹೀಗೆ ದೇವೀರಮ್ಮನ ಉತ್ಸವ ಅಂತಿಮವಾಗಿ ತನ್ನ ಮೂಲಸ್ಥಳವಾದ ಕೆರೆಕೋಡಿಯ ದೇವಸ್ಥಾನದ ಬಳಿಗೆ ಬರುತ್ತದೆ. ಅಲ್ಲಿ ತಮ್ಮ ಇಷ್ಟಾರ್ಥಗಳು ನೆರವೇರಲೆಂದು ಅರಿಕೆ ಹೊತ್ತವರು ಸ್ತ್ರೀ–ಪುರುಷರೆನ್ನದೆ ಎಲ್ಲರೂ ಒಟ್ಟಾಗಿ, ನೇಮನಿಷ್ಟೆಗಳಿಂದ, ಮಡಿಯಿಂದ ಇದ್ದು ಬೆಂಕಿಯ ಕೊಂಡವನ್ನು ಹಾಯುತ್ತಾರೆ. ಈ ಹಂತದಲ್ಲಿ ಮತ್ತೊಂದು ಬಲಿಯನ್ನು ನೀಡಿ, ಅಂತಿಮವಾಗಿ ದೇವರಿಗೆ ಪೂಜೆಯನ್ನು ಸಲ್ಲಿಸುವುದರ ಮೂಲಕ ಆ ವರ್ಷದ ಕೆರೆಕೋಡಮ್ಮನ ಹಬ್ಬ ಹಾಗೂ ಉತ್ಸವ ಕೊನೆಗೊಳ್ಳುತ್ತದೆ.

"ಈ ಗ್ರಾಮದಲ್ಲಿ ಇದೇ ದೊಡ್ಡ ಹಬ್ಬ ಹಾಗೂ ಉತ್ಸವ. ಈ ದೇವರ ಒಡವೆಗಳನ್ನೆಲ್ಲಾ ಗುಬ್ಬಹಳ್ಳಿಯ ಪಟೇಲರಾದ ಚೆನ್ನಬಸಪ್ಪನವರ ಮನೆಯಲ್ಲಿ ಮತ್ತೆ ಮುಂದಿನ ವರ್ಷದ ಹಬ್ಬದವರೆಗೂ ಅವರ ಸ್ವಾಧೀನದಲ್ಲಿ, ಅವರ ಮನೆಯಲ್ಲೇ ಇಟ್ಟಿರುತ್ತಾರೆ."

**ಉಜಿನಿಲಿಂಗೇಶ್ವರ**

ಗುಬ್ಬಹಳ್ಳಿಯಲ್ಲಿ ಕಂಡುಬರುವ ಮತ್ತೊಂದು ದೇವರು ಹಾಗೂ ದೇವಸ್ಥಾನವೆಂದರೆ ಅದು ಉಜಿನಿಲಿಂಗೇಶ್ವರಸ್ವಾಮಿಯ ದೇವಸ್ಥಾನ. ಇದು ಇಲ್ಲಿಯ ಕೆಲವು ಕುರುಬ

ಜನಾಂಗದವರ ಕುಲದೈವ ಹಾಗೂ ಆರಾಧ್ಯದೈವವಾಗಿದೆ. ಉಜಿನಿಲಿಂಗೇಶ್ವರ ದೇವರಿಗೆ ಪ್ರತಿಸೋಮವಾರದ ದಿನ ಪೂಜೆ ಸಲ್ಲಿಸುತ್ತಾರೆ.



**ಉಜಿನಿಲಿಂಗೇಶ್ವರ ದೇವರ ಒಂದು ದೃಶ್ಯ**

**ಉತ್ಸವ:**

"ಪ್ರತಿವರ್ಷದ ಶಿವರಾತ್ರಿ ಹಬ್ಬದ ಮಾರನೆಯ ದಿನ ಈ ದೇವರ ವಿಶೇಷ ಉತ್ಸವ ನಡೆಯುತ್ತದೆ. ಶಿವರಾತ್ರಿ ಹಬ್ಬದ ರಾತ್ರಿ ಹನ್ನೆರಡು ಗಂಟೆಯ ಸಂದರ್ಭದಲ್ಲಿ ಅಡ್ಡಪಲ್ಲಕ್ಕಿಯಲ್ಲಿ ದೇವರ ವಿಗ್ರಹ (ಕಂಚಿನಪ್ರತಿಮೆ)ವನ್ನು ಹೊತ್ತು ವಾದ್ಯಗೋಷ್ಠಿ ಅಥವಾ ಚಕ್ರವಾಕ (ಇದೊಂದು ಬಗೆಯ ಜನಪದ ವಾದ್ಯ) ಸಮೇತ ಪಕ್ಕದ ಹೇಮಾವತಿ ನದಿಗೆ ತೆಗೆದುಕೊಂಡು ಹೋಗುತ್ತಾರೆ. ಅಲ್ಲಿ ದೇವರನ್ನು ಪೂಜಾರರು ತೊಳೆದು ಸ್ವಚ್ಛಗೊಳಿಸಿದ ನಂತರ ಮತ್ತೆ ಬೆಳಗಿನ ಜಾವದ ಹೊತ್ತಿಗೆ ದೇವಸ್ಥಾನಕ್ಕೆ ದೇವರನ್ನು ತರುತ್ತಾರೆ."

ಮತ್ತೆ ದೇವರನ್ನು ಕೆರೆಯ ಬಳಿಗೆ ಗಂಗಾಸ್ಥಾನಕ್ಕೆ ಕರೆದುಕೊಂಡು ಬರುತ್ತಾರೆ. ಇಲ್ಲಿ ಗಂಗಾಸ್ಥಾನದ ಬಳಿ ದೇವರಿಗೆ ಪೂಜೆಯಾದ ನಂತರ ಈ ದೇವರು ಪೂಜಾರರ ಮೇಲೆ ಉಜಿನಿಲಿಂಗೇಶ್ವರ ಸ್ವಾಮಿ ಮೈದುಂಬಿ ಕೊಳ್ಳುತ್ತಾರೆ. ಆಗ ಇಲ್ಲಿಯ ಜನರು ಪೂಜಾರಿಯ ಮೈಮೆಲೆ ದೇವರು ಬಂತು ಎಂದು ಹೇಳುತ್ತಾರೆ. ಮತ್ತೆ ಅಲ್ಲಿಂದ ದೇವರ ಉತ್ಸವ ಮುಂದೆ ಸಾಗಿ ಊರಿನ ಮಧ್ಯಭಾಗದಲ್ಲಿ ಬಂದು ನಿಲ್ಲುತ್ತದೆ. ಅಲ್ಲಿ ಮತ್ತೆ ಪೂಜಾರರ ಮೈಮೇಲೆ ದೇವರು ಮೈದುಂಬಿಕೊಳ್ಳುತ್ತದೆ. ಈ ಸಂದರ್ಭದಲ್ಲಿ ಭಕ್ತರು ಪೂಜಾರರ ಮೂಲಕ ದೇವರಿಗೆ ಪ್ರಶ್ನೆಗಳನ್ನು ಕೇಳಿ ಅದರಿಂದ ಉತ್ತರ ಮತ್ತು ಸಲಹೆಗಳನ್ನು ಪಡೆದುಕೊಳ್ಳುತ್ತಾರೆ. ಇಲ್ಲಿಂದ ಉತ್ಸವ ದೇವಾಲಯದ ಬಳಿಗೆ ತೆರಳಿ ದೇವಸ್ಥಾನದಲ್ಲಿ

ದೇವರನ್ನು ಯತಾಸ್ಥಿತಿ ಇಟ್ಟು ಪೂಜೆ ಸಲ್ಲಿಸುತ್ತಾರೆ. ಈ ದೇವರಿಗೆ ಇದೆ ಕುರುಬ ಜನಾಂಗಕ್ಕೆ ಸೇರಿದ ಎಪ್ಪತ್ತು ವರ್ಷ ವಯಸ್ಸಿನ ಸುಬ್ಬೇಗೌಡ ಎಂಬುವವರು ಪೂಜಾರರು.

ಈ ಉಜಿನಿಲಿಂಗೇಶ್ವರ ದೇವರು ಸಸ್ಯಹಾರಿಯಾಗಿದ್ದು ಬಾಳೆಹಣ್ಣು, ತೆಂಗಿನಕಾಯಿ, ಎಲೆ, ಅಡಿಕೆ, ಕರ್ಪೂರ, ಗಂಧದಕಡ್ಡಿ ಹರಿಷಿಣ, ಕುಂಕುಮಗಳನ್ನಿಟ್ಟು ಭಕ್ತಿಯಿಂದ ಪೂಜಿಸುತ್ತಾರೆ. ಹಾಗು ಬೇರೆ ಬೇರೆ ಗ್ರಾಮಗಳಿಂದ ಬಂದ ಭಕ್ತಾದಿಗಳಿಗೆ ಆ ಉತ್ಸವದ ದಿನ ಅನ್ನ ಸಂತರ್ಪಣೆಯನ್ನು ಏರ್ಪಾಡು ಮಾಡಿರುತ್ತಾರೆ. ಅರಿಕೆ ಹೊತ್ತ ಭಕ್ತಾದಿಗಳು ಶಿವರಾತ್ರಿ ಹಬ್ಬದ ಬೆಳ್ಳಗೆ ಅಂದರೆ ಮಾರನೆಯ ದಿನ. ಅಂದರೆ ಉತ್ಸವದ ದಿನ ತಲೆಕೂದಲನ್ನು ಮುಡಿಕೊಡುತ್ತಾರೆ. ಇದು ಒಂದು ಇಲ್ಲಿಯ ವಿಶೇಷ ಆಚರಣೆಯಾಗಿದೆ.

ಈ ಗ್ರಾಮದ ಮತ್ತೊಂದು ದೇವರು ದೇವಸ್ಥಾನವೆಂದರೆ 'ಈರಣ್ಣ ಮತ್ತು ದೂತಣ್ಣನ ದೇವಸ್ಥಾನ'. ಈ ಈರಣ್ಣ ಮತ್ತು ದೂತಣ್ಣರ ದೇವಸ್ಥಾನ ಈ ಮೇಲೆ ಹೇಳಿದ ಉಜಿನಿಲಿಂಗೇಶ್ವರಸ್ವಾಮಿಯ ದೇವಸ್ಥಾನದ ಪಕ್ಕದಲ್ಲೇ ಇದೆ.



**ಈರಣ್ಣ ಮತ್ತು ದೂತಣ್ಣರ ಮೂರ್ತಿಗಳು**

"ಈ ಈರಣ್ಣ ಮತ್ತು ದೂತಣ್ಣರು, ಉಜಿನಿಲಿಂಗೇಶ್ವರನ ಬಂಟರು. ಇವರಿಗೆ ಪ್ರತಿ ಶುಕ್ರವಾರ ದಿನ ಪೂಜೆ ಸಲ್ಲಿಸುತ್ತಾರೆ. ಇವರು ಮಾಂಸಹಾರಿಗಳು ಇವರಿಗೆ ಬಲಿ ಕೊಡುವ ಪದ್ಧತಿ ಚಾಲ್ತಿಯಲ್ಲಿದೆ."

ಈ ಈರಣ್ಣ ಮತ್ತು ದೂತಣ್ಣರು ಕುರುಬಜನಾಂಗಕ್ಕೆ ಸೇರಿದ ದೇವರುಗಳೆ. ಮೇಲಿನ ಚಿತ್ರದಲ್ಲಿ ಕಾಣುತ್ತಿರುವ ಹಳದಿ ಬಣ್ಣದ ಮುಖವಾಡದ ದೇವರು ಈರಣ್ಣ ಮತ್ತು ಕೆಂಪು ಬಣ್ಣದ ಮುಖವಾಡದ ದೇವರು ದೂತಣ್ಣ. ಈ ಈರಣ್ಣ-ದೂತಣ್ಣರು ತಮ್ಮ

ಒಡೆಯನಾದ ಉಜಿನಿಲಿಂಗೇಶ್ವರಸ್ವಾಮಿಯ ಉತ್ಸವದ ಸಂದರ್ಭದಲ್ಲಿ ಇವರೂ ಜೊತೆ ಜೊತೆಯಲ್ಲೇ ಸಾಗುತ್ತಾರೆ. ಅಂದು ಈ ಈರಣ್ಣ–ದೂತಣ್ಣರಿಗೂ ಬಲಿ ಹಾಗೂ ವಿಶೇಷ ಪೂಜೆಗಳು ನಡೆಯುತ್ತವೆ. ಈ ಈರಣ್ಣ–ದೂತಣ್ಣ ದೇವರುಗಳಿಗೆ ಕುರುಬ ಜನಾಂಗಕ್ಕೆ ಸೇರಿದ ಇಪ್ಪತ್ತು ವರ್ಷ ವಯಸ್ಸಿನ ಕುಮಾರ ಎಂಬುವವರು ಪೂಜಾರರಾಗಿರುತ್ತಾರೆ.

**ಗುಬ್ಬಹಳ್ಳಿಯ ಹಬ್ಬಗಳು**

ಜೀವ ವಿಕಾಸದ ಘಟ್ಟದಲ್ಲಿ ಮಾನವನ ಅಸ್ಥಿತ್ವ ಅತ್ಯಂತ ಪ್ರಮುಖವಾದದು. ಮಾನವ ಮತ್ತು ನಿಸರ್ಗದ ಸಂಪರ್ಕ ಗಾಢವಾಗುತ್ತಾ ಬೆಳೆದಂತೆಲ್ಲಾ ನಿಸರ್ಗದ ಎಲ್ಲಾ ಘಟನೆಗಳು ಬೆರಗು ಮೂಡಿಸಿದವು. ತಾನು ದಿನನಿತ್ಯ ಕಾಣುತ್ತಿದ್ದ ಅದ್ಭುತ ಘಟನೆಗಳನ್ನು ಅತಿಶಯವಾದ ಕುತೂಹಲದಿಂದ ಗಮನಿಸುತ್ತಾ ಬಂದನು. ತನಗೆ ಅರಿವಾಗದ ನಿಗೂಢವಾಗಿ ತೋರುತ್ತಿದ್ದ ನಿಸರ್ಗ ಶಕ್ತಿಯ ಬಗೆಗೆ ಭಯಗೊಂಡು ತನ್ನ ಉಳಿವಿಗಾಗಿ ಹಾಗೂ ಸಾಮೂಹಿಕ ಹಿತರಕ್ಷಣೆಗಾಗಿ ನಿಸರ್ಗ ಶಕ್ತಿಯನ್ನು ಆರಾಧಿಸತೊಡಗಿದನು. ಕಾಲಕ್ರಮೇಣ ನಂಬಿಕೆ ಮತ್ತು ಆಚರಣೆಗಳು ಪೂರಕವಾಗಿ ಬೆಳೆದು ಧಾರ್ಮಿಕ ಸಂಪ್ರದಾಯದ ಉಗಮಕ್ಕೆ ಕಾರಣವಾಯಿತು.

ಭಾರತವು ಸನಾತನ ಪರಂಪರೆಯ ತೌರೂರು. ವಿಜ್ಞಾನ ಪ್ರಗತಿ ಹೊಂದಿ, ಮಾನವ ಬದುಕು ನಾಗರಿಕತೆಯ ಶಿಖರದೆಡೆಗೆ ದಾಪುಗಾಲಿಟ್ಟಿದ್ದರೂ ಸಂಪ್ರದಾಯಬದ್ಧವಾದ ಆಚಾರ–ವಿಚಾರಗಳು ಇಂದಿಗೂ ಜನಪದರ ಬದುಕಿನಲ್ಲಿ ಉಳಿದುಕೊಂಡು ಬಂದಿವೆ. ಜನಪದ ಸಂಸ್ಕೃತಿಯು ನಿಂತ ನೀರಾಗಿರದೆ ಕಾಲಾನುಕ್ರಮದಲ್ಲಿ ಬದಲಾಗುತ್ತಿರುವ ಸಾಮಾಜಿಕ ಹಿನ್ನೆಲೆಯಲ್ಲಿ ರೂಪು ಪಡೆದು ಬೆಳೆಯುತ್ತಾ ಬಂದಿದೆ. ಹೀಗೆ ಬೆಳೆದು ಬಂದಿರುವ ಅನೇಕ ಆಚರಣೆಗಳಲ್ಲಿ ಹಬ್ಬಗಳು ಮತ್ತು ಜಾತ್ರೆಗಳು ಕಾಲಕಳೆದಂತೆ ನಗರೀಕರಣದ ಬದುಕಿನಲ್ಲಿ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಒತ್ತಡದಿಂದ ತಮ್ಮ ವೈಶಿಷ್ಟ್ಯವನ್ನು ಕಳೆದುಕೊಂಡಿರುವುದುಂಟು. ಆದರೆ ಗ್ರಾಮೀಣ ಪರಿಸರದಲ್ಲಿ ಇನ್ನೂ ಪ್ರಾಚೀನ ಪರಂಪರೆಯ ಅಸ್ಥಿತ್ವ ಉಳಿದುಕೊಂಡಿರುವುದನ್ನು ಕಾಣಬಹುದು.

ಮಾನವನು ಸಂಘಜೀವಿಯಾದುದರಿಂದ ವ್ಯವಸ್ಥಿತವಾದ ಸಮಾಜದ ಸಂಘಟನೆ ಅನಿವಾರ್ಯವಾಯಿತು. ವ್ಯಕ್ತಿ ವ್ಯಕ್ತಿಗಳ ನಡುವಣ ಸಂಬಂಧ ಮಧುರವಾಗಿ ಬೆಳೆದು ಉಳಿದು ಬರಬೇಕಾದ ಹಿನ್ನೆಲೆಯಲ್ಲಿ ಭಾವನಾತ್ಮಕವಾಗಿ ಒಂದುಗೂಡುವ ಸಂದರ್ಭಗಳು ಹೆಚ್ಚು ಅವಶ್ಯಕವೆನಿಸಿತು. ಇಂತಹ ದೃಷ್ಟಿಯಿಂದ ಮತ್ತು ಸಾಮಾಜಿಕ ಸುಭದ್ರ ಹೊಂದಾಣಿಕೆಗೆ ಪೂರಕವಾಗಿ ಹಬ್ಬಗಳು ಮತ್ತು ಜಾತ್ರೆಗಳು ಅಸ್ಥಿತ್ವ ಪಡೆದುಕೊಂಡವು.

ಭಾರತದಲ್ಲಿ ಇಂದು ಅನೇಕ ಧರ್ಮಗಳು ನೆಲೆಯಾಗಿವೆ. ಆಯಾ ಧರ್ಮಗಳಿಗೆ ಸಂಬಂಧಿಸಿದ ಅನೇಕ ಹಬ್ಬಗಳು ಆಚರಣೆಯಲ್ಲಿವೆ. ಹಬ್ಬಗಳಲ್ಲಿ ಸಾರ್ವತ್ರಿಕವಾಗಿ ಮತ್ತು

ಆಯಾ ಗ್ರಾಮಗಳಿಗೆ ಸೀಮಿತವಾಗಿ ಆಚರಿಸುವ ಎರಡು ಸಂಪ್ರದಾಯಗಳನ್ನು ಕಾಣಬಹುದು. ಯಾವುದೇ ರೀತಿಯ ಹಬ್ಬಗಳು ಸಾಮಾಜಿಕ ಒಳಿತಿಗಾಗಿ ಎಂಬ ನಂಬಿಕೆಯಿಂದ ದೈವದ ಹೆಸರಿನಲ್ಲಿ ಆಚರಿಸುವುದೇ ಆಗಿವೆ. ಹಿಂದೂಗಳಲ್ಲಿ ಸಾರ್ವತ್ರಿಕವಾಗಿ ಆಚರಿಸುವ ಯುಗಾದಿ, ಗೌರಿ–ಗಣೇಶ, ದೀಪಾವಳಿ, ಸಂಕ್ರಾಂತಿ, ಶಿವರಾತ್ರಿ ಇತ್ಯಾದಿ ಹಬ್ಬಗಳನ್ನು ಕಾಣಬಹುದು. ಗ್ರಾಮದೇವತಾ ಹಬ್ಬಗಳಲ್ಲಿ ಆಯಾ ಗ್ರಾಮಗಳಲ್ಲಿ ನೆಲೆನಿಂತ ಮಾರಿ, ಮಸಣಿ, ಪಟ್ಟಲದಮ್ಮ, ಕೆರೆಕೋಡಮ್ಮ, ಮಂಚಮ್ಮ, ಮಾಯಮ್ಮ, ಬೋರೆದೇವರು, ಬೀರದೇವರು, ದೇವೀರಮ್ಮ, ಚನ್ನಾಗನಳಮ್ಮ, ಸಿಂಗಮ್ಮ, ಸಾಂಕ್ರಾಮಿಕ ರೋಗಗಳಿಗೆ ಸಂಬಂಧಿಸಿದ ದೇವತೆಗಳು ಇತ್ಯಾದಿಯಾಗಿ ಕಂಡುಬರುತ್ತವೆ. ಸಾರ್ವತ್ರಿಕ ಹಬ್ಬಗಳು ನಿಗಧಿಯಾದ ದಿನದಂದು ಎಲ್ಲಾ ಕಡೆ ಏಕರೂಪದಲ್ಲಿ ಆಚರಿಸಲ್ಪಡುತ್ತವೆ. ಆದರೆ ಗ್ರಾಮದೇವತೆಗಳ ಹಬ್ಬಗಳು ಆಯಾ ಗ್ರಾಮಗಳ ಸಂಪ್ರದಾಯಕ್ಕೆ ಸಂಬಂಧಿಸಿದಂತೆ ಬೇರೆ ಬೇರೆಯಾಗಿ ಹಾಗೂ ವೈಶಿಷ್ಟ್ಯಪೂರ್ಣವಾದ ವ್ಯತ್ಯಾಸಗಳಿಂದ ಕೂಡಿ ಆಚರಿಸಲ್ಪಡುತ್ತವೆ.

ಮಾನವನು ತನ್ನ ಅವಿಶ್ರಾಂತ ದುಡಿಮೆಯ ನಡುವೆ ಬಿಡುವು ಮಾಡಿಕೊಂಡು ಎಲ್ಲರೊಡನೆ ಕಲೆತು ಸಂತೋಷದಿಂದ ಕೂಡಿ ಬಾಳಲು ಹಬ್ಬ–ಹರಿದಿನಗಳು ಸಹಕಾರಿಯಾಗಿವೆ. ಕುಟುಂಬಗಳು ಬೆಳೆದು ವಿಭಜನೆಗೊಂಡು ಬದುಕಿನ ಅನಿವಾರ್ಯತೆಯಿಂದ ದೂರ ದೂರ ಚದುರಿಹೋದವರು ಹಬ್ಬಗಳ ನೆಪದಲ್ಲಿ ಆಗಾಗ್ಗೆ ಒಂದೆಡೆ ಕಲೆತು ತಮ್ಮ ಕಷ್ಟಸುಖಗಳನ್ನು ಹಂಚಿಕೊಳ್ಳಲು ಸಹಕಾರಿಯಾಯಿತು. ಅಲ್ಲದೆ ದೇವತೆಗಳನ್ನು ಪೂಜಿಸುವುದರಿಂದ ನಾಡಿಗೆ ಮತ್ತು ತಮಗೆ ಒಳಿತುಂಟಾಗುತ್ತದೆಂಬ ನಂಬಿಕೆ ಹಬ್ಬಗಳು ಚಾಲ್ತಿಯಲ್ಲಿ ಉಳಿದು ಬೆಳೆದು ಬರಲು ಕಾರಣವಾಯಿತು.

ಹಬ್ಬಗಳ ಆಚರಣೆಯ ಹಿನ್ನೆಲೆಯಲ್ಲಿ ಅನೇಕ ಅಂಶಗಳು ವ್ಯಕ್ತವಾಗುತ್ತವೆ. ಗ್ರಾಮದ ರಸ್ತೆ, ಚರಂಡಿಗಳು ಶುಚಿಗೊಂಡು ಗ್ರಾಮ ನೈರ್ಮಲ್ಯಕ್ಕೆ ಕಾರಣವಾಗುತ್ತದೆ. ಮನೆಯ ದುಂಬು, ಧೂಳು ತೆಗೆದು ಗೋಡೆ ಬಿರುಕುಗಳನ್ನು ಮುಚ್ಚಿ ಸುಣ್ಣ–ಬಣ್ಣ ಹೊಡೆಯುವುದರಿಂದ ವರ್ಷಕ್ಕೊಮ್ಮೆ ಮನೆಯನ್ನು ನವೀಕರಿಸಿದಂತಾಗಿ ಶುಭ್ರಗೊಂಡು, ಸುಭದ್ರಗೊಳ್ಳುತ್ತದೆ. ಸುಣ್ಣ ಬಳಿಯುವುದರಿಂದ ಕ್ರಿಮಿಕೀಟಗಳು ನಾಶವಾಗಿ ಮನೆ ಆರೋಗ್ಯದ ಬೀಡಾಗುತ್ತದೆ. ಹಬ್ಬದಲ್ಲಿ ವಿಶೇಷವಾಗಿ ಎಣ್ಣೆ ಹಚ್ಚಿ ಮನೆಮಂದಿಯೆಲ್ಲ ಸ್ನಾನ ಮಾಡುವುದರಿಂದ ಕುಟುಂಬದ ಆರೋಗ್ಯ ವೃದ್ಧಿಸುತ್ತದೆ. ವರ್ಷವೆಲ್ಲಾ ದುಡಿಯುವ ವ್ಯಕ್ತಿಗಳಿಗೆ ಸಂಭ್ರಮ ಹೆಚ್ಚಿ, ವಿಶ್ರಾಂತಿ ದೊರೆತು ಉಲ್ಲಾಸದಾಯಕವಾಗಿರುತ್ತದೆ. ದೂರದ ಸಂಬಂಧಿಗಳ ದರ್ಶನವಾಗುತ್ತದೆ. ವಿವಾಹವಾಗಿ ಹೋಗಿರುವ ತಮ್ಮ ಕುಟುಂಬದ ಹೆಣ್ಣುಮಕ್ಕಳು, ಮೊಮ್ಮಕ್ಕಳು ಕೆಲವು ಕಾಲ ಮನೆಯಲ್ಲಿರುವುದರಿಂದ ಪ್ರೀತಿವಾತ್ಸಲ್ಯ ವೃದ್ಧಿಗೊಳ್ಳಲು ಅವಕಾಶವಾಗುತ್ತದೆ. ಎಲ್ಲಕ್ಕಿಂತ ಮಿಗಿಲಾಗಿ ಭಾವನಾತ್ಮಕ ತಳಹದಿಯ

ಮೇಲೆ ಗ್ರಾಮದವರೆಲ್ಲರೂ ತಮ್ಮ ವೈಮನಸ್ಸು ಮರೆತು ಒಂದೆಡೆ ಕಲೆತು ದೇವತಾರಾಧನೆ ಮಾಡುವುದರಿಂದ ಗ್ರಾಮದ ಒಗ್ಗಟ್ಟಿಗೆ ಕಾರಣವಾಗುತ್ತದೆ. ಇತ್ಯಾದಿಯಾದ ಕೆಲವು ಅಂಶಗಳನ್ನು ಗುರುತಿಸಬಹುದಾಗಿದೆ.

ಒಂದು ಗ್ರಾಮದಲ್ಲಿ ನಡೆಯುವ ಹಬ್ಬವು ಆ ಗ್ರಾಮದ ಎಲ್ಲಾ ವರ್ಗದ ಮತ್ತು ಜಾತಿಯ ಜನರ ಒಟ್ಟು ಸಹಕಾರ ವ್ಯವಸ್ಥೆಯ ಪ್ರತೀಕವಾಗಿರುತ್ತದೆ. ಜನಪದರ ಮುಖ್ಯ ಕಸುಬು ಬೇಸಾಯವೇ ಆಗಿರುವುದರಿಂದ ಬೇಸಾಯ ಕಾರ್ಯದಲ್ಲಿ ಹಾಗೂ ದಿನ ನಿತ್ಯದ ಬದುಕಿನಲ್ಲಿ ಇತರ ಜಾತಿಯ ಜನರ ಸಹಕಾರ ಅನಿವಾರ್ಯವಾಗಿರುತ್ತದೆ. ಅಂತೆಯೇ ಇಂತಹ ವ್ಯವಸ್ಥೆಯ ಹೊಂದಾಣಿಕೆ ಮತ್ತಷ್ಟು ಗಾಢವಾಗಲು ಅನುಕೂಲವಾಗುವಂತೆ ಹಬ್ಬಗಳು ಸಹಕಾರಿಯಾಗಿವೆ. ಹರಿಜನರ ವರ್ಗ ತಮಟೆ, ನಗಾರಿ, ವಾದ್ಯದೊಡನೆ ದೇವರ ಕಾರ್ಯದಲ್ಲಿ ತೊಡಗುವುದರಿಂದ ಅವರಿಗೆ ಕೆಲವು ಹಕ್ಕು ಬಾಧ್ಯತೆಗಳು ಸಾಂಪ್ರದಾಯಿಕವಾಗಿ ಬಂದಿರುತ್ತವೆ. ಕೆಲವು ಗ್ರಾಮಗಳಲ್ಲಿ ಒಕ್ಕಲಿಗ ಅರ್ಚಕ ಮತ್ತು ಹೆಬ್ಬಾರೆ ಬಾರಿಸುವ ಹರಿಜನರು ಹಬ್ಬದ ಆರಂಭದ ಸಂಕೇತವಾಗಿ ಹೆಬ್ಬಾರೆ ಕಟ್ಟಿದಂದಿನಿಂದ ಹಬ್ಬ ಮುಗಿಯುವವರೆಗೆ ಜನಿವಾರ ಧಾರಣೆ ಮಾಡುವ ಸಂಪ್ರದಾಯ ಜಾತಿಯ ಅಂತರವನ್ನು ಕಡಿಮೆ ಮಾಡುವಂತೆ ತೋರುತ್ತದೆ. ಅಗಸರು ಮಡಿಬಟ್ಟೆ ಕಾರ್ಯದಲ್ಲಿ ಹಾಗೂ ಪಂಜು ಸೇವೆಯಲ್ಲಿ ಸಹಕರಿಸುತ್ತಾರೆ. ಅಂತೆಯೇ ಆ ಗ್ರಾಮದ ಇತರ ಜಾತಿಯವರೂ ಸಹ ಒಂದಲ್ಲಾ ಒಂದು ರೀತಿಯಲ್ಲಿ ತಮ್ಮ ಹಕ್ಕು ಬಾಧ್ಯತೆಯ ಹಿನ್ನೆಲೆಯಲ್ಲಿ ಭಾಗಿಯಾಗುತ್ತಾರೆ. ಒಂದು ವೇಳೆ ಯಾವುದೇ ಜಾತಿಯವರಿಗೆ ಗ್ರಾಮದಲ್ಲಿ ಅನ್ಯಾಯವಾದಾಗ ಇಂತಹ ಸಂದರ್ಭಗಳಲ್ಲಿ ಅವರು ಭಾಗವಹಿಸಲು ನಿರಾಕರಿಸುವ ಸಾಧ್ಯತೆಯಿರುವುದರಿಂದ ಹಬ್ಬಗಳು ನಿಂತು ಹೋಗುತ್ತಿದ್ದವು. ಅದಕ್ಕಾಗಿ ಪರಸ್ಪರ ಸಮಾನ ಸಹಕಾರ ಪ್ರವೃತ್ತಿಗೆ ಇಂತಹ ಹಬ್ಬಗಳು ಸಾಕಾರವಾಗಿ ಬೆಳೆದು ಬಂದಿರುವುದನ್ನು ಕಾಣಬಹುದು.

'ಜಾತ್ರೆ' ಹಬ್ಬದ ಒಂದು ಭಾಗವಾಗಿ ಅಸ್ಥಿತ್ವಕ್ಕೆ ಬಂದುದಾಗಿದೆ. ಜನಪದ ಸಂಸ್ಕೃತಿಯ ಪ್ರತೀಕವಾದ ಹಬ್ಬ ಮತ್ತು ಜಾತ್ರೆಗಳು ಧಾರ್ಮಿಕ ವಿಧಿ ವಿಧಾನಗಳನ್ನೊಳಗೊಂಡು ಅವೆರಡೂ ಒಂದೇ ಎಂಬಂತೆ ತೋರುತ್ತದೆ. ಆದರೆ ಹಬ್ಬದ ಸಂದರ್ಭಗಳಲ್ಲಿ ಜಾತ್ರೆ ನಡೆಯಬೇಕೆಂಬ ನಿಯಮವಿಲ್ಲ. ಜಾತ್ರೆ ನಡೆಯುವಾಗೆಲ್ಲ ಹಬ್ಬದ ಆಚರಣೆ ಇದೇ ಇರುತ್ತದೆ. ಆದ್ದರಿಂದ ಹಬ್ಬದ ಕಾರಣದಿಂದ ಎಲ್ಲಾ ಕಡೆಗಳಿಂದಲೂ ಜನತೆ ಭಕ್ತಿಯ ಕಾರಣಕ್ಕಾಗಿ ಸೇರುವ ಸಂದರ್ಭದಲ್ಲಿ ದೇವರ ಸಂಬಂಧವಾದ ಜನಪದ ಕಲೆಗಳ ಪ್ರದರ್ಶನ ಹಾಗೂ ಅನೇಕ ಧಾರ್ಮಿಕ ವಿಧಿ ವಿಧಾನಗಳ ಆಚರಣೆ ಕಂಡುಬಂದು ಜನಾಕರ್ಷಣೆಯ ಕೇಂದ್ರವಾಗುತ್ತಿತ್ತು. "ಧಾರ್ಮಿಕ ಸ್ವರೂಪದ ಹಬ್ಬ ಕಾಲಕ್ರಮೇಣ ಸಾಂಸ್ಕೃತಿಕ ವ್ಯಕ್ತಿತ್ವವನ್ನು ಪಡೆದು ಕೊನೆಗೆ ವಾಣಿಜ್ಯ ಮುಖವನ್ನು ರೂಪಿಸಿಕೊಂಡಾಗ

ಜಾತ್ರೆಯಾಯಿತು" ಎಂಬ ಡಾ.ದೇ.ಜವರೇಗೌಡರ (ಜನಪದ ಅಧ್ಯಯನ) ಅಭಿಪ್ರಾಯ ಸರ್ವ ಸಮ್ಮತವಾದುದಾಗಿದೆ.

ಆದಿ ಮಾನವನಿಂದ ಮೊದಲ್ಗೊಂಡು ನದಿ ದಡಗಳನ್ನಾಶ್ರಯಿಸಿ ಬೇಸಾಯ, ಪಶುಸಂಗೋಪನೆ ಮೊದಲಾದ ಕಸುಬಿನ ಮೂಲಕ ಬದುಕನ್ನು ವಿಸ್ತರಿಸಿಕೊಂಡ ಮಾನವನಿಂದ ಇಂದಿನವರೆಗೆ ಸಂಸ್ಕೃತಿ ವಿಕಾಸವಾಗುತ್ತಾ ಬಂದಿದೆ. ಇಂತಹ ಸನಾತನ ಪರಂಪರೆಯ ಅಂಶವಾಗಿ ಧಾರ್ಮಿಕ ಶ್ರದ್ಧೆ ಮತ್ತು ಭಕ್ತಿಭಾವಗಳು ಜನಪದರ ಬದುಕಿನ ಅವಿಭಾಜ್ಯ ಅಂಗವಾಗಿ ಉಳಿದುಬಂದಿವೆ. ನಂಬಿಕೆ ಮತ್ತು ಆಚರಣೆಯ ಹಿನ್ನೆಲೆಯಲ್ಲಿ ಜನಪದರು ವೈಯಕ್ತಿಕ ಮತ್ತು ಸಾಮೂಹಿಕ ಹಿತರಕ್ಷಣೆಯ ಉದ್ದೇಶದಿಂದ ನಿರಂತರವಾಗಿ ಹಬ್ಬ ಮತ್ತು ಜಾತ್ರೆಗಳನ್ನು ನಡೆಸುತ್ತಾ ಬಂದಿದ್ದಾರೆ. ಈ ನಿಟ್ಟಿನಲ್ಲಿ 'ಗುಬ್ಬಹಳ್ಳಿ ಒಂದು ಅಧ್ಯಯನ'ದ ದೃಷ್ಟಿಯಿಂದ ಇಲ್ಲಿನ ವಿಶೇಷ ಹಬ್ಬಗಳನ್ನು ಮತ್ತು ಸಾರ್ವತ್ರಿಕ ಹಬ್ಬಗಳನ್ನು ಪರಿಚಯಿಸಲಾಗಿದೆ.

**ಮಹದೇಶ್ವರನ ಹಬ್ಬ**

"ಈ ಮಹದೇಶ್ವರನ ಹಬ್ಬವನ್ನು ಈ ಗುಬ್ಬಹಳ್ಳಿ ಗ್ರಾಮದ ಲಿಂಗಾಯಿತ ಜನಾಂಗದವರು ಆಚರಿಸುತ್ತಾರೆ. ಈ ಹಬ್ಬವನ್ನು ಸಾಮಾನ್ಯವಾಗಿ ಫೆಬ್ರವರಿ ಅಥವಾ ಮಾರ್ಚ್ ತಿಂಗಳಲ್ಲಿ ಒಂದು ದಿನ ಅಂದರೆ ಸೋಮವಾರದ ದಿನ ಆಚರಿಸುತ್ತಾರೆ. ಈ ಹಬ್ಬವನ್ನು ಹೊಲ ಅಥವಾ ತೋಟದಲ್ಲಿ ಹೋಗಿ ಅಲ್ಲಿ ಭಯ, ಭಕ್ತಿ, ಗೌರವಗಳಿಂದ ಮಹದೇಶ್ವರನನ್ನು ಪೂಜಿಸಿ ಅಲ್ಲಿಯೇ ಅನ್ನ, ಸಾರು, ಪಲ್ಯ, ಪಾಯಸ ಮೊದಲಾದವುಗಳನ್ನು ಮಾಡಿ ನಂತರ ದೇವರಿಗೆ ನೈವೇದ್ಯ ಮಾಡಿ, ಸಂತೋಷದಿಂದ ಊಟಮಾಡುತ್ತಾರೆ. ಅಲ್ಲಿ ಮಾಡಿದ ಅಡಿಗೆಯ ಊಟ ಒಂದು ವೇಳೆ ಹೆಚ್ಚಾಗಿ ಮಿಕ್ಕಿಬಿಟ್ಟರೆ ಅದನ್ನು ಹಿಂದಕ್ಕೆ ಅಥವಾ ಮನೆಗೆ ತರುವಂತಿಲ್ಲ. ಅಲ್ಲಿಯೇ ಭೂಮಿಯಲ್ಲಿ ಗುಂಡಿತೋಡಿ ಹೂತು ಬರುತ್ತಾರೆ." ಹೀಗೆ ಗುಬ್ಬಹಳ್ಳಿಯಲ್ಲಿ ಮಹದೇಶ್ವರನ ಹಬ್ಬ ಆಚರಣೆಯಲ್ಲಿದೆ.

**ಕನ್ನಂಬಾಡಮ್ಮನ ಹಬ್ಬ**

"ಈ 'ಕನ್ನಂಬಾಡಮ್ಮನ' ಹಬ್ಬವನ್ನು ಫೆಬ್ರವರಿ ಅಥವಾ ಮಾರ್ಚ್ ತಿಂಗಳಲ್ಲಿ ಅಂದರೆ ಮಹದೇಶ್ವರನ ಹಬ್ಬವಾದ ಮಾರನೆಯ ದಿನ ಲಿಂಗಾಯಿತ ಜನಾಂಗದವರನ್ನು ಹೊರತುಪಡಿಸಿದಂತೆ ಉಳಿದ ಜನಾಂಗದವರೆಲ್ಲಾ ಆಚರಿಸುತ್ತಾರೆ. ಈ ಕನ್ನಂಬಾಡಮ್ಮನ ಹಬ್ಬ ಮಾಂಸಹಾರಿಯಾಗಿದ್ದು, ಇದು ಗ್ರಾಮದ ನಿಗಧಿಯಾದ ತೋಟದಲ್ಲಿ ಕೆಲವು ಕಲ್ಲುಗಳನ್ನು ಇಟ್ಟು ಕನ್ನಂಬಾಡಮ್ಮನನ್ನು ನೆನೆದು ಕುರಿ ಅಥವಾ ಮೇಕೆಯನ್ನು ಬಲಿಕೊಡುತ್ತಾರೆ. ಅಲ್ಲಿಂದ ಅವರವರ ಮನೆಗೆ ಬಂದು ಅಡಿಗೆ ಮಾಡಿ ಕನ್ನಂಬಾಡಮ್ಮನಿಗೆ

ಎಡೆಯಿಟ್ಟು ಅನಂತರ ನೆಂಟರಿಷ್ಟರಿಗೆ ಉಣಬಡಿಸಿ, ತಾವೂ ಊಟ ಮಾಡಿ ಸಂಭ್ರಮಿಸುತ್ತಾರೆ.” ಹೀಗೆ ಗುಬ್ಬಹಳ್ಳಿಯಲ್ಲಿ ಕನ್ನಂಬಾಡಮ್ಮನ ಹಬ್ಬ ಆಚರಣೆಯಲ್ಲಿದೆ.

**ಕೃಷಿ ಸಂಬಂಧಿ ಹಬ್ಬಗಳು**

ಭಾರತದಲ್ಲಿ ಬೆಳದು ಬಂದ ನದೀ ಸಂಸ್ಕೃತಿಯಿಂದ ಮೊದಲ್ಗೊಂಡು ಇಲ್ಲಿಯವರೆಗೆ ಕೃಷಿಯು ಪ್ರಧಾನ ಕಸುಬಾಗಿ ಬೆಳೆದು ಬಂದಿದೆ. ಕೃಷಿಯನ್ನೇ ಆಶ್ರಯಿಸಿದ ರೈತವರ್ಗ ಕೃಷಿಗೆ ಸಹಾಯವಾದ ಎಲ್ಲಾ ಅಂಶಗಳನ್ನು ದೈವತ್ವದ ಹಿನ್ನೆಲೆಯಲ್ಲಿ ಪೂಜ್ಯ ಭಾವನೆಯಿಂದ ನೋಡುತ್ತಾ ಬಂದಿದೆ. ಇಂತಹ ವಿಶಿಷ್ಟ ಪರಂಪರೆಯ ಹಿನ್ನೆಲೆಯಲ್ಲಿ ನಡೆಯುವ ಕೆಲವು ಆಚರಣೆಗಳನ್ನು ಇಲ್ಲಿ ಗಮನಿಸಬಹುದು.

ಮಳೆಯಾಧಾರಿತ ಕೃಷಿ ಇದ್ದುದರಿಂದ ಮಳೆಯ ಅಧಿದೇವತೆ ದೇವೇಂದ್ರನನ್ನು ಕಾಲ ಕಾಲಕ್ಕೆ ಮಳೆ ಸುರಿಸಿ ತಮ್ಮ ಬೆಳೆಯನ್ನು ರಕ್ಷಿಸುವಂತೆ ಪ್ರಾರ್ಥಿಸುತ್ತಿದ್ದರು. ಮಳೆಯನ್ನು ‘ಮಳೆರಾಯ’ನೆಂದು ಕರೆದು ಪೂಜಿಸುವುದು ರೂಢಿಯಲ್ಲಿತ್ತು. ಮಳೆಯ ಸಂಬಂಧವಾಗಿ ಕಾರಬ್ಬ ಮತ್ತು ಮಖೆಹಬ್ಬಗಳನ್ನು ಕಾಣಬಹುದು. ಗುಬ್ಬಹಳ್ಳಿಗ್ರಾಮದಲ್ಲಿ ಕಂಡುಬರುವ ಕೃಷಿ ಸಂಬಂಧಿ ಹಬ್ಬಗಳನ್ನು ಈ ಕೆಳಕಂಡಂತೆ ಪರಿಚಯಿಸಲಾಗಿದೆ.

**ಕಾರಬ್ಬ**

“ಈ ಕಾರಬ್ಬವನ್ನು ಏಕಾದಶಿ ಹಬ್ಬಕ್ಕಿಂತ ಮೊದಲು ಆಚರಿಸಲಾಗುತ್ತದೆ. ಇದು ವ್ಯವಸಾಯದ ಸಂಬಂಧಿ ಹಬ್ಬವೂ ಆಗಿದೆ. ಸಂಕ್ರಾಂತಿಯಲ್ಲಿ ಮಾಡುವಂತೆ ದನ, ಕರುಗಳನ್ನು ತೊಳೆದು, ಕೊಂಬುಗಳಿಗೆ ಬಣ್ಣಹಚ್ಚಿ ಗೌಸು ಹೊದಿಸಿ ಅಲಂಕರಿಸುತ್ತಾರೆ. ವ್ಯವಸಾಯಕ್ಕೆ ಬಳಸುವ ನೇಗಿಲು, ನೊಗ, ಕುಂಟೆ, ಹಲುಬೆ, ಗುದ್ದಲಿ, ಹಾರೆ, ಕುಡುಗೋಲು. ಕೊಡಲಿ ಮೊದಲಾದವುಗಳನ್ನು ತೊಳೆದು ಮನೆಯ ಜಗುಲಿಯಲ್ಲಿಟ್ಟು ಗಂಧ, ಅರಿಶಿಣ, ಕುಂಕುಮ, ಹೂವು ಮೊದಲಾದವುಗಳನ್ನು ಹಾಕಿ ಎಡೆಯಿಟ್ಟು ಪೂಜಿಸುತ್ತಾರೆ. ಈ ಎಡೆಯನ್ನು ಹಸುಗಳಿಗೆ ಅಥವಾ ಕರುಗಳಿಗೆ ತಿನ್ನಿಸುವುದುಂಟು. ವಿಶೇಷ ಔತಣಕ್ಕೆ ಹೊಸ ಅಳಿಯಂದಿರನ್ನು ಕರೆಸುವುದುಂಟು. ದೀಪಾವಳಿಯಲ್ಲಿ ದನ ಕೆಣಕಬೇಡ, ಕಾರಬ್ಬದಲ್ಲಿ ಜನ ಕೆಣಕಬೇಡ ಎಂಬ ಗಾದೆ ರೂಢಿಯಲ್ಲಿದೆ.”

ಮಳೆಗಾಲವನ್ನು ‘ಕಾರ್ಗಾಲ’ವೆಂದು ಕರೆಯುತ್ತಾರೆ. ಕಾಲಕಾಲಕ್ಕೆ ಸರಿಯಾಗಿ ಮಳೆ ಬಿದ್ದು ಕೃಷಿ ಚೆನ್ನಾಗಿ ನಡೆಯಲಿ ಎಂಬ ಉದ್ದೇಶದಿಂದ ಪೂಜಿಸಿ ಒಲಿಸಿಕೊಳ್ಳುವ ಭಾವನೆಯಿಂದ ಕಾರು ಹಬ್ಬವನ್ನು ಮಾಡುವ ಪ್ರವೃತ್ತಿ ಬೆಳೆದು ಬಂದಿರಬೇಕು. ಅಲ್ಲದೆ ತಮ್ಮ ಬೇಸಾಯಕ್ಕೆ ಸಹಕರಿಸುವ ಮಳೆಗೆ ಮೊದಲ ಪೂಜೆಯನ್ನು ಸಲ್ಲಿಸುವುದು ಹಾಗೂ ಕೃಷಿ ಉಪಕರಣಗಳನ್ನು ಪೂಜಿಸಿ ಬಳಸುವ ಹಿನ್ನೆಲೆಯಲ್ಲಿ ಇದು ಅಸ್ತಿತ್ವ ಪಡೆದಿರಬಹುದು. ಈ ಹಬ್ಬವನ್ನು ಗುಬ್ಬಹಳ್ಳಿಯಲ್ಲಿ ಆಚರಿಸುತ್ತಾರೆ.

## ರಾಶಿ ಪೂಜೆ

ಈ ರಾಶಿ ಪೂಜೆಯನ್ನು "ಒಕ್ಕಣೆ ಮಾಡಿ ರಾಶಿ ಹಾಕಿದ ಧಾನ್ಯವನ್ನು ಕಣದಿಂದ ಮನೆಗೆ ಕೊಂಡೊಯ್ಯುವ ಮುನ್ನ ಪೂಜೆ ಮಾಡುವ ಸಂಪ್ರದಾಯವಿದೆ. ರಾಶಿಯ ಮೇಲೆ ತುದಿಯಲ್ಲಿ ಕುಡುಗೋಲನ್ನು ಪೂರ್ವದ ಕಡೆ ತಿರುಗಿಸಿ ಸಿಕ್ಕಿಸುತ್ತಾರೆ. ಹಾಲು ಮತ್ತು ತುಪ್ಪವನ್ನು ರಾಶಿಯ ನೆತ್ತಿಯ ಮೇಲೆ ಬಿಟ್ಟು, ಗರಿಕೆಯ ಬೆನಕವನ್ನಿಟ್ಟು ಪೂಜೆ ಸಲ್ಲಿಸುತ್ತಾರೆ. ಅನಂತರ ಧಾನ್ಯದ ರಾಶಿಯನ್ನು 'ಹೆಚ್ಚಲಿ' ಎಂದು ಹೇಳಿ ಅಳೆಯುತ್ತಾರೆ. ಅಳೆದ ಮೊದಲ ಕೊಳಗದ ಧಾನ್ಯವನ್ನು ದೇವಕೊಳಗವೆಂದು ತಮ್ಮ ಮನೆದೇವರ ಹೆಸರು ಹೇಳಿ, ಉಳಿದ ಧಾನ್ಯವನ್ನು ಅಳತೆ ಮಾಡಿಕೊಂಡು ಮನೆಗೆ ಕೊಂಡೊಯ್ಯುತ್ತಾರೆ." ಇದು ಗುಬ್ಬಹಳ್ಳಿಯಲ್ಲಿ ಆಚರಣೆಯಲ್ಲಿದೆ.

## ಮುನಿಯಪ್ಪನಹಬ್ಬ

ಕೃಷಿ ಪ್ರದೇಶಗಳಲ್ಲಿ ವಿಶಿಷ್ಟ ಶಕ್ತಿಯೊಂದು ಸರ್ಪರೂಪದಲ್ಲಿ ಸುತ್ತಾಡುತ್ತಿರುತ್ತದೆಂಬ ನಂಬಿಕೆಯಿಂದ ಇದನ್ನೆ 'ಮುನಿಯಪ್ಪ', 'ಮುನೇಶ್ವರ' ಎಂದು ಕರೆಯುತ್ತಾರೆ. ವ್ಯವಸಾಯ ಸಂಬಂಧ ಕ್ಷೇತ್ರಗಳಲ್ಲಿ ಸಂಚರಿಸುವ ಈ ಶಕ್ತಿಯಿಂದ ಬೆಳೆಗೆ ಹಾನಿಯಾಗದಿರಲೆಂದು ಮತ್ತು ಯಾವ ಕೇಡು ಒದಗದಿರಲೆಂದು ಈ ಶಕ್ತಿಯನ್ನು ಆರಾಧಿಸಲು ತೊಡಗಿದರು. ಎಲ್ಲಾ ಪ್ರದೇಶಗಳಲ್ಲಿನ ಜನತೆ ಇಂತಹ ನಂಬಿಕೆಯನ್ನು ಹೊಂದಿ 'ಮುನಿಪೂಜೆ', 'ಮುನಿಸೇವೆ', 'ಮುನಿಯಪ್ಪನಹಬ್ಬ', 'ಮುನೇಶ್ವರನಪೂಜೆ', 'ಹೊಲದಹಬ್ಬ', 'ತೋಟದಹಬ್ಬ' ಎಂದೆಲ್ಲಾ ಆಚರಿಸುತ್ತಾರೆ.

"ಯುಗಾದಿ ಹಬ್ಬಕ್ಕೆ ಹಿಂದೆ ತೋಟ ಅಥವಾ ಹೊಲ, ಗದ್ದೆಗಳಲ್ಲಿ ಕುರಿ, ಕೋಳಿಗಳನ್ನು ಕುಯ್ದು ಒಂದು ನಿರ್ದಿಷ್ಟವಾದ ಮರ ಅಥವಾ ಹುತ್ತದ ಮುಂದೆ ಸಣ್ಣದಾದ ಮೂರು ಕಲ್ಲುಗಳನ್ನಿಟ್ಟು ಮಾಂಸದಡುಗೆಯನ್ನು ಎಡೆ ಮಾಡುತ್ತಾರೆ. ತಮ್ಮ ತೋಟದ ಅಥವಾ ಜಮೀನಿನ ಸುತ್ತ ರಕ್ತ ಕಲಸಿದ ಅನ್ನವನ್ನು ಎರಚಿ ಮುನಿಯಪ್ಪನಿಗೆ ಶಾಂತಿ ಮಾಡುತ್ತಾರೆ." ತದನಂತರ ಬಂದ ನೆಂಟರಿಷ್ಟರೊಡನೆ ಮಾಂಸದೂಟ ಮಾಡುತ್ತಾರೆ. ಇದರಿಂದ ತೃಪ್ತಿಗೊಂಡ ಮುನಿಯಪ್ಪನಿಂದ ತಮಗೆ ಯಾವಕೇಡು ಸಂಭವಿಸುವುದಿಲ್ಲವೆಂದು ಭಾವಿಸುತ್ತಾರೆ. ತಮ್ಮ ಜಾನುವಾರುಗಳಿಗೆ ಕೇಡಾಗದಂತೆಯೂ, ತಮಗೆ ಉತ್ತಮ ಬೆಳೆ ಬರಲೆಂದೂ ಮುನಿಯಪ್ಪನಲ್ಲಿ ಬೇಡಿಕೊಳ್ಳುತ್ತಾರೆ. ಹೀಗೆ ನಡೆಸುವುದನ್ನು 'ಮುನಿಸೇವೆ' ಎಂದು ಹೆಚ್ಚಾಗಿ ಕರೆಯುತ್ತಾರೆ. ಹೀಗೆ ಗುಬ್ಬಹಳ್ಳಿಯಲ್ಲಿ ಲಿಂಗಾಯಿತ ಜನಾಂಗದವರನ್ನು ಹೊರತುಪಡಿಸಿದಂತೆ ಉಳಿದ ಜನಾಂಗದವರು ಈ ಕುರಿಕೋಳಿಗಳನ್ನು ಕುಯ್ದು ಮುನಿಸೇವೆ ಮಾಡುತ್ತಾರೆ.

ಇನ್ನು ಲಿಂಗಾಯಿತ ಜನಾಂಗದವರು ತಮ್ಮಂತಮ್ಮ ತೋಟಗಳಲ್ಲಿ ಹಾಗೂ ಕಟಾವುಗೊಂಡ ಖಾಲಿ ಭೂಮಿಗಳಲ್ಲಿ ತಾವಾಗಲಿ ಅಥವಾ ಆರಾಧ್ಯರಿಂದ ಬೆಲ್ಲದ ಅನ್ನ ಎಲ್ಲವೆ ಕಿಚಡಿ ಅನ್ನ ಮಾಡಿಸಿ ಮರದ ಕೆಳಗೆ ಇಲ್ಲವೆ ಹುತ್ತದ ಬಳಿ ಮೂರು ಕಲ್ಲುಗಳನ್ನಿಟ್ಟು, ತುಂಬೆ ಹೂವನ್ನು ಮುಡಿಸಿ, ಎಡೆಹಾಕಿ ಈ ರೀತಿಯಾಗಿ ಮುನಿಸೇವೆ ಮಾಡುತ್ತಾರೆ.

**ಸಾರ್ವತ್ರಿಕ ಹಬ್ಬಗಳು**

ಒಂದು ನಾಡಿನಾದ್ಯಂತ ಎಲ್ಲಾ ಗ್ರಾಮ, ನಗರ, ಪಟ್ಟಣಗಳಲ್ಲಿ ಏಕರೂಪದಲ್ಲಿ ಆಚರಿಸಲಾಗುವ ಹಬ್ಬಗಳನ್ನು ಸಾರ್ವತ್ರಿಕ ಹಬ್ಬಗಳೆಂದು ಕರೆಯಬಹುದು. ಇವುಗಳನ್ನು ಎಲ್ಲಾ ಕಡೆಯಲ್ಲಿಯೂ ಒಂದು ಗೊತ್ತಾದ ದಿನದಂದು ಆಚರಿಸಲಾಗುತ್ತದೆ. ಹೀಗೆ ಆಚರಿಸುವ ಯುಗಾದಿ, ಗೌರಿ–ಗಣೇಶ, ಸಂಕ್ರಾಂತಿ, ದೀಪಾವಳಿ, ಶಿವರಾತ್ರಿ ಇತ್ಯಾದಿಗಳನ್ನು ಕಾಣಬಹುದು. ಗುಬ್ಬಹಳ್ಳಿ ಗ್ರಾಮದಲ್ಲಿ ಈ ಸಾರ್ವತ್ರಿಕ ಹಬ್ಬಗಳನ್ನು ಆಚರಿಸುತ್ತಾರೆ. ಅವುಗಳನ್ನು ಈ ಕೆಳಕಂಡಂತೆ ಪರಿಚಯಿಸಲಾಗಿದೆ.

**ಯುಗಾದಿ**

ಸಾರ್ವತ್ರಿಕ ಹಬ್ಬಗಳಲ್ಲಿ ಒಂದಾದ 'ಯುಗಾದಿ'ಯು ಹಿಂದೂ ಸಂಪ್ರದಾಯದ ಪ್ರಕಾರ ವರ್ಷದ ಆರಂಭವೇ ಆಗಿದೆ. ಪಾಲ್ಗುಣ ಮಾಸ ಮುಗಿದು ಅಮಾವಾಸ್ಯೆಯ ಮಾರನೆಯ ದಿನ ಬರುವ ಚೈತ್ರ ಮಾಸದ ಶುಭೋದಯ ದಿನವೇ 'ಯುಗಾದಿ'. ಇದು ವಸಂತ ಋತುವಿನ ಆರಂಭವೂ ಹೌದು. ಶಿಶಿರ ಋತು ಕಳೆದು ಎಲ್ಲೆಡೆ ಹೊಸ ಚಿಗುರು, ಹೂವಿನಿಂದ ಕಂಗೊಳಿಸುವ ನಿಸರ್ಗದ ರಮಣೀಯ ಸೌಂಧರ್ಯದ ರಥದಲ್ಲಿ, ಕೋಗಿಲೆಯ ಇಂಪಾದ ಸ್ವರದ ಕಹಳೆಯೊಡನೆ 'ಯುಗಾದಿ' ವಿಜಯ ಮಾಡುತ್ತದೆ. ಯುಗದ ಆರಂಭವೇ ಯುಗಾದಿ–ಉಗಾದಿ ಎಂಬ ರೂಪ ಪಡೆದಿದೆ.

ಜನಪದರ ಬದುಕಿನಲ್ಲಿ 'ಉಗಾದಿ' ವೈಶಿಷ್ಟ್ಯ ಪೂರ್ಣವಾಗಿ ಆಚರಣೆಯಲ್ಲಿದೆ. ಮನೆಯನ್ನು ಗುಡಿಸಿ, ಸಾರಿಸಿ, ಮಾವಿನ ಸೊಪ್ಪಿನಿಂದ ಮನೆಯ ಹೆಬ್ಬಾಗಿಲಿಗೆ ತೋರಣಕಟ್ಟಿ ನಡುವೆ ಬೇವಿನ ಸೊಪ್ಪನ್ನು ಸೇರಿಸುವುದರಿಂದ ವಿಶಿಷ್ಟವಾದ ಕಂಪು ಸೂಸುತ್ತಿರುತ್ತದೆ. ಬೇವು ಕ್ರಿಮಿನಾಶಕ ಗುಣವನ್ನು ಒಳಗೊಂಡಿರುವುದರಿಂದ ಮನೆಯ ರೋಗಾಣು ರಹಿತ ಸ್ವಚ್ಛತೆಯಿಂದ ಕೂಡಿರುತ್ತದೆ. ಹಬ್ಬದ ಹಿಂದಿನ ಅಮಾವಾಸ್ಯೆ ರಾತ್ರಿಯಂದು ಕಳ್ಳರು ಎಲ್ಲಾದರೂ ಕನ್ನ ಹಾಕಿ ಕದ್ದು ಯಶಸ್ವಿಯಾದರೆ ಮುಂದಿನ ವರ್ಷ ಪೂರ್ಣ ಅವರಿಗೆ ಕಳ್ಳತನದಲ್ಲಿ ಯಶಸ್ಸು ದೊರೆಯುತ್ತದೆಂಬ ನಂಬಿಕೆ ಇದೆ. ಕೆಲವು ಕಡೆಗಳಲ್ಲಿ ಅಮಾವಾಸ್ಯೆಯ ರಾತ್ರಿ ಮನೆಗಳಿಗೆ ಕಲ್ಲು ಅಥವಾ ಹುಣಸೆ ಬೀಜವನ್ನು ಹೊಡೆದು ಬೈಯ್ಯಿಸಿಕೊಳ್ಳುವುದುಂಟು. ಹಬ್ಬದ ದಿನ ಬೆಳಗ್ಗೆ ಮನೆ ಮಂದಿಯೆಲ್ಲ ಎಣ್ಣೆ ಸ್ನಾನ ಮಾಡಿ,

ಹೊಸಬಟ್ಟೆ ತೊಟ್ಟು, ದೇವರಿಗೆ ಪೂಜಿಸಿ ಬೇವು ಬೆಲ್ಲವನ್ನು ತಿನ್ನುತ್ತಾರೆ. ಇದು ವರ್ಷ ಪೂರ್ಣ ಬರಬಹುದಾದ ನೋವು-ನಲಿವು ಎರಡನ್ನೂ ಸಮಾನವಾಗಿ ಸ್ವೀಕರಿಸುವ ಮನೋವೃತ್ತಿಯನ್ನು ವ್ಯಕ್ತಪಡಿಸುತ್ತದೆ. ಅಲ್ಲದೆ ಬೇವು ರೋಗನಿರೋಧಕ ಗುಣವನ್ನು ಉಳ್ಳದ್ದರಿಂದ ನಮ್ಮ ದೇಹಕ್ಕೆ ರೋಗನಿರೋಧಕ ಶಕ್ತಿ ಲಭಿಸುತ್ತದೆ. ವರ್ಷಪೂರ್ಣ ನಮ್ಮನ್ನು ಯಾವುದೇ ರೋಗುರುಜಿನಗಳು ಕಾಡದಿರಲಿ ಎಂಬ ಭಾವನೆ ಇಂತಹ ಸಂಪ್ರದಾಯಕ್ಕೆ ಆಸ್ಪದ ನೀಡಿರುವಂತೆ ತೋರುತ್ತದೆ. ಹಬ್ಬದ ದಿನ ಒಬ್ಬಟ್ಟಿನ ಊಟ ಎಲ್ಲೆಡೆಯೂ ವಿಶೇಷವಾಗಿರುತ್ತದೆ.

ಹಬ್ಬದ ಹಿಂದಿನ ಮತ್ತು ಮುಂದಿನ ದಿನಗಳು ಸೇರಿದಂತೆ ಮೂರು ದಿನಗಳ ಕಾಲವು ಹಣದ ಜೂಜಿನ ಆಟಗಳು ಸಾಮಾನ್ಯವಾಗಿರುತ್ತವೆ. ಇಸ್ಪೀಟು, ಪಚ್ಚಿ ಮೊದಲಾದ ಆಟಗಳ ಮೂಲಕ ವರ್ಷ ಪೂರ್ಣ ಮುಂದೆ ತಮಗೆ ಲಾಭವೋ, ನಷ್ಟವೋ ಎಂಬುದರ ಅದೃಷ್ಟ ಪರೀಕ್ಷೆಯನ್ನು ನಡೆಸುತ್ತಾರೆ. ಗುಂಪುಗಳಾಗಿ ಕಲೆತು ಆಟದಲ್ಲಿ ಮೈಮರೆತು ಕೆಲವು ಪೈಸೆಗಳಿಂದ ಸಾವಿರಾರು ರೂಪಾಯಿಗಳವರೆಗೆ ಪಣವೊಡ್ಡಿ ಗೆಲವು-ಸೋಲಿನ ಪರೀಕ್ಷೆ ನಡೆಸುತ್ತಾರೆ. ಇಂತಹ ಆಟದಲ್ಲಿ ಗಂಡಸರು ತಲ್ಲೀನರಾದರೆ ಮಕ್ಕಳು ಹೆಂಗಸರು ಉಯ್ಯಾಲೆ ಇತ್ಯಾದಿ ಆಟಗಳಲ್ಲಿ ಮೈಮರೆಯುತ್ತಾರೆ. ಆದರೆ ಇತ್ತೀಚೆಗೆ ಇಂತಹ ಉಯ್ಯಾಲೆ ಆಟ ಕಡಿಮೆಯಾಗಿದೆ. ಇಸ್ಪೀಟು ಜೋರಾಗಿದೆ.

ಉಗಾದಿ ಹಬ್ಬದ ದಿನ ಬೇವು-ಬೆಲ್ಲ ಸವಿದ ನಂತರ ತಮ್ಮ ಗ್ರಾಮಗಳಿಗೆ ನಿಯಮಿತವಾಗಿ ಬರುವ ತಮ್ಮ ಪುರೋಹಿತರು ಅಥವಾ ಜೋಯಿಸರನ್ನು ಕರೆಸಿ ಚಾವಡಿಯಲ್ಲಿಯೋ ಊರಗೌಡನ ಮನೆ ಜಗಲಿಯಲ್ಲಿಯೋ ಕುಳಿತು ಉಗಾದಿ ಫಲಾಫಲಗಳನ್ನು ಕೇಳುತ್ತಾರೆ. ಇದಕ್ಕೆ ಪಂಚಾಂಗ ಓದಿಸುವುದೆಂದು ಕರೆಯಲಾಗುತ್ತದೆ. ಆಸಕ್ತಿ ಉಳ್ಳವರ ಮತ್ತು ಊರಿನ ಪ್ರಮುಖರ ಹೆಸರು ಬಲಕ್ಕೆ ಅನುಗುಣವಾಗಿ ರಾಶಿಫಲವನ್ನು ನೋಡಿ ಆ ವರ್ಷದ ಅವರವರ ಭವಿಷ್ಯವನ್ನು ತಿಳಿಸಲಾಗುತ್ತದೆ. ತಮ್ಮ ರಾಶಿಫಲ ಉತ್ತಮವಾಗಿದ್ದಾಗ ಖುಷಿಪಡುವ ಜನ ತಮಗಾಗದವರ ಪಂಚಾಂಗ ಫಲ ಕೆಟ್ಟದ್ದಾಗಿದೆಯೆಂದು ತಿಳಿದುಬಂದಾಗ ಒಳಗೊಳಗೆ ಖುಷಿಪಟ್ಟು ಬೀಗುವುದುಂಟು. ಅನಂತರ ಪುರೋಹಿತರಿಗೆ ಯಥೋಚಿತ ಕಾಣಿಕೆ ನೀಡಿ ಕಳುಹಿಸುತ್ತಾರೆ.

ಹಬ್ಬದ ಮಾರನೆಯ ದಿನ 'ವರ್ಷತೊಡಕು' ಆಚರಿಸಲಾಗುತ್ತದೆ. ವರ್ಷದ ತೊಡಗುವಿಕೆಯೇ 'ವರ್ಷತೊಡಕು' ಆಗಿದೆ. ಮುಂದಿನ ವರ್ಷದ ಎಲ್ಲಾ ಕಾರ್ಯಗಳು ಸುಲಲಿತವಾಗಿರಲಿ ಎನ್ನುವ ಮತ್ತು ವಿಶೇಷ ಭೋಜನದಿಂದ ಪಡೆದ ಸಂತೃಪ್ತಿ ವರ್ಷ ಪೂರ್ಣ ಉಳಿಯಲಿ ಎಂಬ ನಂಬಿಕೆಯೇ ಇಲ್ಲಿ ಎದ್ದು ತೋರುತ್ತದೆ. ಮಾಂಸಾಹಾರಿಗಳು ಕುರಿ, ಕೋಳಿಗಳನ್ನು ಕತ್ತರಿಸಿ ಮಾಂಸ ಭೋಜನದ ಗಮ್ಮತ್ತಿನಲ್ಲಿ ವರ್ಷತೊಡಕು

ಕಳೆಯುತ್ತದೆ. ಅಂದು ಸಂಜೆ ಪಶ್ಚಿಮ ದಿಗಂತದಲ್ಲಿ ಕಾಣುವ ಬಿದಿಗೆ ಚಂದ್ರನ ದರ್ಶನ ಮಾಡುತ್ತಾರೆ. ಚಂದ್ರನ ಕೋಡುಗಳು ಸಮಾನವಾಗಿದ್ದರೆ ಸಮಾಜಕ್ಕೆ ಒಳಿತಾಗುತ್ತದೆಂದು, ಬಲಭಾಗದ ಕಡೆಗೆ ಚಂದ್ರನ ಕೋಡು ತಗ್ಗಿದ್ದರೆ ಅನ್ನದ ಕೋಡು ಬಿದ್ದಿದೆಯೆಂದೂ, ಇದರಿಂದ ಆಹಾರ ಪದಾರ್ಥಗಳ ಬೆಳೆ ಕಡಿಮೆ ಪ್ರಮಾಣವೆಂದೂ ಭಾವಿಸುತ್ತಾರೆ. ಹೀಗೆ ಉಗಾದಿಯ ಮೂಲಕ ವರ್ಷದ ಆರಂಭದ ಸುಚನೆಗಳನ್ನು ಅರಿತು ಬದುಕಿನಲ್ಲಿ ಬರುವ ಕಷ್ಟ–ಸುಖಗಳನ್ನು ಸಮ ಸ್ಥೈರ್ಯದಿಂದ ಎದುರಿಸಲು ಸಜ್ಜುಗೊಳ್ಳುವುದು ಅರ್ಥಪೂರ್ಣವೆನಿಸುತ್ತದೆ.

ಇಂತಹ ವಿಶಿಷ್ಟ ಪೂರ್ಣವಾದ ಯುಗಾದಿಹಬ್ಬವನ್ನು ಗುಬ್ಬಹಳ್ಳಿಯ ಜನರು ಬಹಳ ಸಡಗರ ಸಂಭ್ರಮಗಳಿಂದ ಆಚರಿಸುತ್ತಾರೆ. ಅಂದು ಊರಿನ ದೇವಾಲಯಗಳಲ್ಲಿ ವಿಶೇಷ ಪೂಜೆನಡೆಯುತ್ತದೆ. ತಮ್ಮ ತಮ್ಮ ಮನೆಗಳನ್ನು ಗುಡಿಸಿ, ಸಾರಿಸಿ, ಬಣ್ಣಬಣ್ಣಗಳಿಂದ ರಂಗೋಲೆ ಹಾಕಿ, ಮಾವಿನಸೊಪ್ಪಿನಿಂದ ಮನೆಯ ತೋರಣಗಳನ್ನು ಕಟ್ಟಿ, ಅಲ್ಲಲ್ಲಿ ಬೇವಿನ ಸೊಪ್ಪನ್ನು ಸಿಕ್ಕಿಸಿರುತ್ತಾರೆ. ಅಂದು ಎಣ್ಣೆಯ ಸ್ನಾನ ಮಾಡಿ ಹೊಸ ಬಟ್ಟೆತೊಟ್ಟು, ದೇವರಿಗೆ ಪೂಜಿಸಿ ಜೀವನದಲ್ಲಿ ಕಷ್ಟ–ಸುಖಗಳು ಸಮನಾಗಿ ಬರಲೆಂದು ಬೇವು–ಬೆಲ್ಲ ತಿನ್ನುತ್ತಾರೆ. ಅಂದು ಸಾಮಾನ್ಯವಾಗಿ ಎಲ್ಲರ ಮನೆಗಳಲ್ಲೂ ಒಬ್ಬಟ್ಟಿನ (ಹೋಳಿಗೆ) ಊಟ ವಿಶೇಷವಾಗಿ ಕಂಡುಬರುತ್ತದೆ. ಹೀಗೆ ಗುಬ್ಬಹಳ್ಳಿಯಲ್ಲಿ ಯುಗಾದಿ ಹಬ್ಬವನ್ನು ಆಚರಿಸುತ್ತಾರೆ.

**ಸಂಕ್ರಾಂತಿ**

ಸಂಕ್ರಾಂತಿ ಹಬ್ಬ ಸೂರ್ಯ ಪಥ ಚಲನೆಯ ಸಂಕ್ರಮಣಕಾಲದ ಸಂಕೇತವಾಗಿ ಆಚರಿಸಲಾಗುವ 'ಸಂಕ್ರಾಂತಿ'ಯು ಉತ್ತರಾಯಣ ಪುಣ್ಯಕಾಲದ ಪ್ರಾರಂಭವೂ ಆಗಿದೆ. ಈ ಶುಭದಿನದಂದು ಪವಿತ್ರ 'ಕಿಚ್ಚು' ಹಾಕಿ ಜಾನುವಾರುಗಳನ್ನು ಕಿಚ್ಚಿನಲ್ಲಿ ಹಾಯಿಸುವುದರಿಂದ ಅವುಗಳಿಗೆ ಯಾವುದೇ ಕೇಡು ಸಂಭವಿಸುವುದಿಲ್ಲವೆಂಬ ನಂಬಿಕೆಯಿದೆ. ಬೇಸಾಯಗಾರರಿಗೆ ಸುಗ್ಗಿ ಸಂಭ್ರಮ ಆಗತಾನೆ ಕಳೆದು ಒಕ್ಕಣೆ ಕರ್ಯ ಮುಗಿದಿರುವುದರಿಂದ ರೈತವರ್ಗ ಸಂತೃಪ್ತಿಯ ಹರ್ಷದಿಂದ ಕೂಡಿರುತ್ತದೆ. ಕೃಷಿಕರು, ಕೃಷಿ ಕಾರ್ಮಿಕರು ಹಾಗೂ ಭಿಕ್ಷುಕರು ಎಲ್ಲರಿಗೂ ದವಸ–ಧಾನ್ಯ ಸಮೃದ್ಧವಾಗಿ ದೊರೆತು ಸಂತುಷ್ಟಿಯಿರುವ ಕಾಲದಲ್ಲಿ ಆಗಮಿಸುವ ಈ ಹಬ್ಬವು ದುಡಿದು ದಣಿದ ಜನಕ್ಕೆ ಮುದ ನೀಡುತ್ತದೆ.

ಮಂಡ್ಯ ಜಿಲ್ಲೆಯಲ್ಲಿ ಬೇಸಾಯವನ್ನೇ ಪ್ರಧಾನವಾಗಿ ನಂಬಿರುವ ಒಕ್ಕಲಿಗರು ಅಧಿಕ ಸಂಖ್ಯೆಯಲ್ಲಿದ್ದಾರೆ. ಮನೆಮನೆಯಲ್ಲೂ ಸ್ವಚ್ಛಗೊಳಿಸಿ ಹಬ್ಬದ ಸಿದ್ಧತೆಗೆ ತೊಡಗುತ್ತಾರೆ. ಮನೆಯ ಹೆಂಗಸರು ಕಪ್ಪು ಎಳ್ಳನ್ನು ಉಜ್ಜಿ ಎಳ್ಳು ಬೀರುವ ಸಂಪ್ರದಾಯಕ್ಕೆ ತಯಾರಿ ನಡೆಸಿಕೊಳ್ಳುತ್ತಾರೆ. ಸಂಕ್ರಾಂತಿ ಹಬ್ಬದ ಹಿಂದಿನ ದಿನ ಸಂಜೆಯಾಗುತ್ತಿದ್ದಂತೆ ಮನೆಗಳ

ಮುಂಬಾಗ ಹುಲ್ಲಿನ ಮೆದೆ ಇತ್ಯಾದಿಗಳಿಗೆ 'ಪತ್ರೆ'ಯನ್ನು ಸಿಕ್ಕಿಸುತ್ತಾರೆ. ಪತ್ರೆಯಲ್ಲಿ ಗಂಡು ಉತ್ತರಾಣಿ, ಮಾವಿನ ಸೊಪ್ಪು ಮತ್ತು ಅಂಕೋಲೆ ಕಡ್ಡಿಗಳನ್ನು ಸೇರಿಸುತ್ತಾರೆ. ಕೆಲವು ಕಡೆಗಳಲ್ಲಿ ಇವುಗಳ ಜೊತೆಗೆ ಹಲಸಿನ ಸೊಪ್ಪನ್ನು ಸೇರಿಸುವುದುಂಟು. ಶ್ರೀರಂಗಪಟ್ಟಣ ಸುತ್ತಮುತ್ತ ಮಾವಿನ ಸೊಪ್ಪು ಎಗಚೆಸೊಪ್ಪು ಮತ್ತು ಗಂಡು ಉತ್ತರಾಣಿಯನ್ನು ಸೇರಿಸಿ ಹಾಕುತ್ತಾರೆ. ಇಲ್ಲಿ ಹಬ್ಬದಂದು ಒಂದು ಎಗಚೆ ಹಣ್ಣನ್ನಾದರೂ ತಿನ್ನಬೇಕೆಂಬ ನಂಬಿಕೆಯೂ ಆಚರಣೆಯಲ್ಲಿದೆ. ನಾಗಮಂಗಲ ತಾಲ್ಲೂಕಿನ ಕೆಲವು ಸ್ಥಳಗಳಲ್ಲಿ ಮೆದೆಗಳಿಗೆ ಅವರೆ ಹುಚ್ಚೆಳ್ಳು ಮತ್ತು ಪುಂಡಿ ಹೂವಿನಿಂದ ಅಲಂಕಾರ ಮಾಡುವುದುಂಟು. ಅಡುಗೆಗೆ ಸೊಗಡು ಅವರೆ ಕಾಯಿಯ ಬಳಕೆ ಎಲ್ಲೆಡೆ ಕಂಡುಬರುತ್ತದೆ. ಹೊಸ ಅಕ್ಕಿಯ ಅನ್ನವನ್ನು ಎಡೆಮಾಡಿ 'ಹೊಸಮೀಸಲು' ಎಂದು ದೇವಾಲಯಗಳಲ್ಲಿ 'ತಳಿಗೆ'ಗಳನ್ನು ಹಬ್ಬದ ಹಿಂದಿನ ದಿನ ಮಾಡುವುದುಂಟು.

ಹಬ್ಬದ ದಿನ ಎಲ್ಲರೂ ಸ್ನಾನ ಮಾಡಿ ಹೊಸ ಬಟ್ಟೆ ತೊಟ್ಟು ಸಂಭ್ರಮ ಪಡುತ್ತಾರೆ. ತಮ್ಮ ಮನೆಯ ದನ, ಕರುಗಳ ಮೈ ತೊಳೆದು ಅವುಗಳ ಕೋಡಿಗೆ ಬಣ್ಣಬಳಿದು, ಬಣ್ಣದ ಕಾಗದಗಳನ್ನು ಕತ್ತರಿಸಿ ಚಿತ್ತಾಕರ್ಷಕವಾಗಿ ಕಾಣುವಂತೆ ಅಂಟಿಸುತ್ತಾರೆ. ಕೆಲವರು ದನಗಳ ಮೈಗೆ ಚಿತ್ತಾರಗೊಂಡ ಸುಂದರ 'ಗೌಸು'ಗಳನ್ನು ಹೊದಿಸುತ್ತಾರೆ. ಬಣ್ಣ ಬಣ್ಣದ ಬಲೂನುಗಳನ್ನು ಕೋಡಿಗೆ ಕಟ್ಟಿ, ಕೊರಳಿಗೆ ಹೂವಿನ ಹಾರ ಹಾಗೂ ಕಾಗದದ ರಂಗು ರಂಗಿನ ಹಾರ, ಚಕ್ರಗಳಿಂದ ಅಲಂಕರಿಸುತ್ತಾರೆ. ಕೊಡಿಗೆ ಮತ್ತು ಮೈಮೇಲೆ ವೃತ್ತಗಳನ್ನೋ, ಸ್ವಸ್ತಿಕ್ ಚಿಹ್ನೆಗಳನ್ನೊ ಹಾಕಲು ಹೆಚ್ಚಾಗಿ ನೀಲಿಯ ನನೇ ಬಳಸುತ್ತಾರೆ. ವರ್ಷಪೂರ್ಣ ತಮ್ಮ ವ್ಯವಸಾಯಕ್ಕೆ ಸಹಕಾರಿಯಾಗಿ ದುಡಿದು ತಮ್ಮೆಲ್ಲರ ಬದುಕನ್ನು ಹಸನಾಗಿಸಿರುವ "ಬಸವಣ್ಣದೇವರಿಗೆ" ಇಂತಹ ಅಲಂಕಾರದ ಮೂಲಕ ರೈತರು ತಮ್ಮ ಕೃತಜ್ಞತೆ ಸಲ್ಲಿಸುತ್ತಾರೆ. ಅಲಂಕೃತಗೊಂಡ ಎತ್ತು, ಕರು, ಎಮ್ಮೆ, ಹಸು, ಕುರಿ, ಮೇಕೆಗಳನ್ನು 'ಕಿಚ್ಚೆ'ನ ಸ್ಥಳಕ್ಕೆ ಹೊಡೆದುಕೊಂಡು ಹೋಗುತ್ತಾರೆ.

ಊರ ಮುಂದೆ ದಾರಿ ಬದಿಯಲ್ಲಿ 'ಸಂಕ್ರಾಂತಮ್ಮ'ನನ್ನು ತಿದ್ದಿ ಪೂಜಿಸುವ ಪದ್ಧತಿಯಿದೆ. ಸುಮಾರು ಎರಡು ಅಥವಾ ಎರಡೂವರೆ ಅಡಿ ಎತ್ತರದ ಪಿರಮಿಡ್ ಆಕೃತಿಯಲ್ಲಿ ಮಣ್ಣಿನಿಂದ ಗೋಪುರ ಕಟ್ಟಿ ಅದಕ್ಕೆ ಸುಣ್ಣದ ತಿಳಿ ಮತ್ತು ಕೆಮ್ಮಣ್ಣು ತಿಳಿ ಎರಚಿ ಹೂವುಗಳಿಂದ ಅಲಂಕರಿಸಿರುತ್ತಾರೆ. ಊರಿನಲ್ಲಿ ತೋಟಿ ಸಂಗ್ರಹಿಸಿದ ಅಕ್ಕಿಯಿಂದ ಪೊಂಗಲನ್ನು ತಯಾರಿಸುತ್ತಾರೆ. ತಿದ್ದಿದ ಸಂಕ್ರಾಂತಮ್ಮನಿಂದ ಸುಮಾರು ನೂರು ಗಜದೂರದಲ್ಲಿ 'ಕಿಚ್ಚೆ'ಗಾಗಿ ಗ್ರಾಮಸ್ಥರೆಲ್ಲ ಒಣಹುಲ್ಲನ್ನು ರಸ್ತೆಯಲ್ಲಿ ಅಡ್ಡವಾಗಿ ಹಾಕಿ, ಸುಮಾರು ಎರಡು-ಮೂರು ಅಡಿ ಎತ್ತರದ ರಾಶಿಯನ್ನು ಉದ್ದಕ್ಕೂ ಹರಡುತ್ತಾರೆ. ಸಂಕ್ರಾಂತಮ್ಮನಿಗೆ ಪೂಜಿಸಿ ನೆರೆದ ಎತ್ತು, ಹಸು, ಕರು, ಎಮ್ಮೆ, ಕುರಿಗಳಿಗೆ ಪೊಂಗಲು ಮತ್ತು ತೀರ್ಥವನ್ನು ಎರಚುತ್ತಾ ಬೆಂಕಿಯ ದೊಂದಿಗಳನ್ನು ಹಿಡಿದು ಹುಲ್ಲಿನ ರಾಶಿಯ ಬಳಿ

ಬಂದು ಬೆಂಕಿ ಹಾಕುತ್ತಾರೆ. ಹತ್ತಿ ಉರಿಯುವ ಕಿಚ್ಚಿನಲ್ಲಿ ನಾಮುಂದು, ತಾಮುಂದು ಎಂದು ದನಗಳನ್ನು ಮುನ್ನುಗ್ಗಿಸಿ, ನೆಗಿಸಿ ಸಂಭ್ರಮದ ಓಟದಿಂದ ಮನೆಗೆ ಬರುತ್ತಾರೆ. ಹೀಗೆ 'ಕಿಚ್ಚು' ದಾಟಿ ಬಂದ ದನಗಳಿಗೆ ಮನೆಯಲ್ಲಿ ಪೂಜೆ ಮಾಡಲಾಗುತ್ತದೆ. ಕಿಚ್ಚಿನ ಬೂದಿಯನ್ನು ತಂದು ಮನೆಯಲ್ಲಿ ಉಳಿದ ಎಳೆಯ ಕರುಗಳ ಕಾಲಿಗೆ ಸವರಿ, ಪೊಂಗಲನ್ನು ತಿನ್ನಿಸುತ್ತಾರೆ,

ಹಬ್ಬದ ಪ್ರಯುಕ್ತ ಹೆಣ್ಣು ಮಕ್ಕಳು ಸಂಭ್ರಮದಲ್ಲಿ ಮನೆ ಮನೆಗೆ ಎಳ್ಳು ಬೀರುವ ಕಾರ್ಯದಲ್ಲಿ ತೊಡುಗತ್ತಾರೆ. ಎಳ್ಳು, ಹುರಿಗಡಲೆ, ಕಡಲೇಬೀಜ, ಬೆಲ್ಲದಚೂರು, ಕೊಬ್ಬರಿಚೂರು, ಸಕ್ಕರೆ ಅಚ್ಚು ಬೆರೆಸಿ ಕಬ್ಬಿನ ತುಂಡಿನೊಡನೆ ಹಂಚುವ ಈ ಪದ್ಧತಿಯು ಮನುಷ್ಯ ತಮ್ಮಲ್ಲಿನ ದ್ವೇಷವನ್ನು ಮರೆತು ಪರಸ್ಪರ ಪ್ರೀತಿ ವಿಶ್ವಾಸ ಬೆಳೆಸಬೇಕೆಂಬ ಸಂಕೇತದಿಂದ ಕೂಡಿದೆ. 'ಎಳ್ಳು ತಿಂದು ನಾಲ್ಕು ಒಳ್ಳೆಯ ಮಾತಾಡು' ಎಂಬ ಮಾತಿದೆ. ಬೇಸಾಯಗಾರರು ಒಂದಲ್ಲಾ ಒಂದು ರೀತಿ ಶ್ರಮದ ದುಡಿಮೆಯಲ್ಲಿ ತೊಡಗಿರುತ್ತಾರೆ. ಬೆಳೆಕುಯ್ಯುವುದು, ಕಟ್ಟುವುದು, ಒಕ್ಕಣೆ ಇತ್ಯಾದಿ ಬಿಡುವಿಲ್ಲದ ದುಡಿತದಿಂದ ಶಾರೀರಿಕವಾಗಿ ಬಳಲಬೇಕಾಗುತ್ತದೆ. ಆದ್ದರಿಂದ ಎಳ್ಳು, ಬೆಲ್ಲ, ಕಡಲೇಬೀಜ ಇತ್ಯಾದಿ ಬೆರೆಸಿ ತಿನ್ನುವುದರಿಂದ ದೇಹಕ್ಕೆ ಬೇಕಾದ ಕೊಬ್ಬಿನ ಅಂಶ ದೊರೆಯುತ್ತದೆ. ಹಬ್ಬದ ಆಚರಣೆ ಮನಸ್ಸಿಗೆ ಮತ್ತು ದೇಹಕ್ಕೆ ಹಿತಕಾರಿಯಾಗಿರುತ್ತದೆ.

ಹಬ್ಬದ ಮರುದಿನ ಬೆಳಿಗ್ಗೆ ಮಾಂಸಭೋಜನ. ಇದಕ್ಕಾಗಿ ಸಾಕಷ್ಟು ಸಂಖ್ಯೆಯಲ್ಲಿ ಕುರಿ, ಕೋಳಿಗಳನ್ನು ಕತ್ತರಿಸಲಾಗುತ್ತದೆ. ಹಿಂದಿನ ದಿನವಷ್ಟೇ ಪೂಜಿಸಿಕೊಂಡು ಪವಿತ್ರ ಕಿಚ್ಚನ್ನು ದಾಟಿದ ಕುರಿ, ಮೇಕೆಗಳು ಮರುದಿನ ಹಬ್ಬದ ಸಡಗರಕ್ಕೆ ಬಲಿಯಾಗಬೇಕಾದ ವಿಪರ್ಯಾಸ ಎಲ್ಲೆಡೆ ಕಂಡುಬರುತ್ತದೆ. ಸೂರ್ಯನ ಪಥ ಬದಲಾವಣೆಯ ಸಂಕ್ರಮಣದಲ್ಲಿ ಬಲಿ ನೀಡಬೇಕೆಂಬ ಸಂಪ್ರದಾಯದ ಹಿನ್ನೆಲೆಯಲ್ಲಿ ಮಾಂಸಭೋಜನ ಬೆಳೆದು ಬಂದಿರಬಹುದು. ಇದು ಮಾಂಸಾಹಾರಿಗಳಿಗೆ ಸಂತೋಷಕರ ಸಂಗತಿಯೂ ಹೌದು. ಕೆಲವು ಕಡೆಗಳಲ್ಲಿ ಸಂಕ್ರಾಂತಿ ಹಿಂದಿನ ದಿನ ಬೇಟೆಗೆ ಹೋಗಿ ನರಿಯನ್ನು ಹಿಡಿದು ತಂದು ಹಬ್ಬದ ದಿನ ಅದನ್ನು ಅಲಂಕರಿಸಿ, ಅದರ ದೇಹಕ್ಕೆ ಬಾಣ, ಬಿರುಸು, ಪಟಾಕಿಗಳನ್ನು ಕಟ್ಟಿ ಚಿತ್ರಹಿಂಸೆಗೆ ಗುರಿಪಡಿಸಿ ಅದನ್ನು ಬಲಿ ನೀಡುವುದುಂಟು. ಹಬ್ಬದ ಸಂಪ್ರದಾಯದ ಹೆಸರಿನಲ್ಲಿ ನಡೆಯುವ ಇಂತಹ ಪ್ರಾಣಿ ಹಿಂಸೆ ಇನ್ನೂ ಆಚರಣೆಯಲ್ಲಿರುವುದು ವಿಷಾದದ ಸಂಗತಿಯಾಗಿದೆ.

ಹೀಗೆ ಸಡಗರ ಸಂತೋಷದ ಹಬ್ಬವೇ ಆದ ಸಂಕ್ರಾಂತಿ ಹಬ್ಬವನ್ನು ಗುಬ್ಬಹಳ್ಳಿಯಲ್ಲಿಯೂ ಆಚರಿಸುತ್ತಾರೆ. ಸಂಕ್ರಾಂತಿ ಹಬ್ಬದ ಹಿಂದಿನ ದಿನ ಸಂಜೆಯವೇಳೆ ಮನೆಗಳ ಮುಂದಿನ ಹುಲ್ಲಿನ ಮೆದೆ ಇತ್ಯಾದಿಗಳಿಗೆ ಪತ್ರೆಯನ್ನು ಸಿಕ್ಕಿಸುತ್ತಾರೆ. ಪತ್ರೆಯಲ್ಲಿ

ಗಂಡು ಉತ್ತರಾಣಿ, ಮಾವಿನ ಸೊಪ್ಪು ಮತ್ತು ಅಂಕೋಲೆ ಕಡ್ಡಿಗಳನ್ನು ಸೇರಿಸುತ್ತಾರೆ. ಅಡುಗೆಗೆ ಸೊಗಡು ಅವರೆಕಾಯಿಯನ್ನು ಅಂದು ಬಳಸುತ್ತಾರೆ. ಹೊಸ ಅಕ್ಕಿಯಲ್ಲಿ ಅಂದು ಅನ್ನ ಮಾಡಿ ಊಟ ಮಾಡುತ್ತಾರೆ.

ಈ ಸಂಕ್ರಾಂತಿ ಹಬ್ಬದಲ್ಲಿ ಕಿಚ್ಚು ಹಾಯಿಸುವ ಆಚರಣೆಯು ಗುಬ್ಬಹಳ್ಳಿಯಲ್ಲಿ ಕಂಡುಬರುತ್ತದೆ. ಹಬ್ಬದ ದಿನ ಎಲ್ಲರೂ ಸ್ನಾನ ಮಾಡಿ ಹೊಸ ಬಟ್ಟೆ ತೊಟ್ಟು ಸಂಭ್ರಮಪಡುತ್ತಾರೆ. ತಮ್ಮ ತಮ್ಮ ಮನೆಯ ದನ–ಕರುಗಳ ಮೈತೊಳೆದು ಅವುಗಳ ಕೋಡಿಗೆ ಬಣ್ಣ ಬಳಿದು, ಬಣ್ಣದ ಕಾಗದಗಳನ್ನು ಕತ್ತರಿಸಿ ಚಿತ್ತಾಕರ್ಷಕವಾಗಿ ಕಾಣುವಂತೆ ಮಾಡುತ್ತಾರೆ. ಕೆಲವರು ದನಗಳ ಮೈಗೆ ಚಿತ್ತಾರಗೊಂಡ ಸುಂದರ 'ಗೌನು'ಗಳನ್ನು ಹೊದಿಸುತ್ತಾರೆ. ಬಣ್ಣದ ಬಲೂನುಗಳನ್ನು ಕೋಡಿಗೆ ಕಟ್ಟಿ, ಕೊರಳಿಗೆ ಹೂವಿನ ಹಾರ ಹಾಗೂ ಕಾಗದದ ರಂಗು ರಂಗಿನ ಹಾರ, ಚಕ್ರಗಳಿಂದ ಅಲಂಕರಿಸುತ್ತಾರೆ. ಕೋಡಿಗೆ ಮತ್ತು ಮೈಮೇಲೆ ವೃತ್ತಗಳನ್ನೋ, ಸ್ವಸ್ತಿಕ್ ಚಿಹ್ನೆಗಳನ್ನೊ ಬರೆದಿರುತ್ತಾರೆ. ಹೀಗೆ ಅಲಂಕೃತವಾದ ಎತ್ತು, ಕರು, ಎಮ್ಮೆ, ಹಸು, ಕುರಿ, ಮೇಕೆಗಳನ್ನು ಸಾಯಂಕಾಲದ ಸಂದರ್ಭದಲ್ಲಿ ಊರ ಮುಂದಿನ ಕಿಚ್ಚು ಹಾಯಿಸುವ ಸ್ಥಳಕ್ಕೆ ಕರೆತಂದು ಸಂತೋಷದಿಂದ ಕಿಚ್ಚು ಹಾಯಿಸಿ ತಮ್ಮ ತಮ್ಮ ಮನೆಗಳಿಗೆ ತೆರಳುತ್ತಾರೆ.



ತಂಪಾದ ವಾತಾವರಣದಲ್ಲಿ ಸಂಜೆಯ ವೇಳೆ ಹೆಣ್ಣುಮಕ್ಕಳು ಹಾಗೂ ಹೆಂಗಸರು ಶೃಂಗರಿಸಿಕೊಂಡು ಸುಂದರವಾಗಿ ಕಾಣುತ್ತಾ ಎಳ್ಳುಬೆಲ್ಲ, ಹುರಿಗಡಲೇ, ಕಡಲೇಬೀಜ, ಬೆಲ್ಲದಚೂರು, ಕೊಬ್ಬರಿಚೂರು, ಸಕ್ಕರೆಅಚ್ಚು, ಬೆರೆಸಿ ಕಬ್ಬಿನ ತುಂಡಿನೊಡನೆ ಮನೆ ಮನೆಗೆ ಹೋಗಿ ಎಳ್ಳು ಬೀರುವ ಮೂಲಕ ಸ್ನೇಹ ಸಂಕೇತವನ್ನು ಸಾರುತ್ತಾರೆ. ಹೀಗೆ ಗುಬ್ಬಹಳ್ಳಿ ಗ್ರಾಮದಲ್ಲಿ ಸಂಕ್ರಾಂತಿ ಹಬ್ಬ ಒಂದು ಸಂಭ್ರಮದ ಹಬ್ಬವಾಗಿ ಕಾಣಿಸಿಕೊಳ್ಳುತ್ತದೆ.

**ಗೌರಿ–ಗಣೇಶನಹಬ್ಬ**

ಭಾದ್ರಪದ ಮಾಸದ ಶುಕ್ಲಪಕ್ಷದ ತೃತೀಯ ದಿನದಂದು ಗೌರಿಹಬ್ಬವೂ, ಚತುರ್ಥಿಯಂದು ಗಣೇಶ ಹಬ್ಬವೂ ಬರುತ್ತದೆ. ವಿವಾಹವಾಗಿ ಹೊರ ಹೋಗಿರುವ ಹೆಣ್ಣು ಮಕ್ಕಳು ಗೌರಿ–ಗಣೇಶನ ಹಬ್ಬದಲ್ಲಿ ಆಹ್ವಾನಿಸಲ್ಪಟ್ಟು ತೌರಿಗೆ ಆಗಮಿಸುತ್ತಾರೆ. ತವರಿನ ಹಂಬಲವುಳ್ಳ ಹೆಣ್ಣುಮಕ್ಕಳು ತಾಯಿ ತಂದೆ, ಅಣ್ಣ–ತಮ್ಮ, ಅಕ್ಕ–ತಂಗಿಯರೊಡನೆ ಆನಂದದಿಂದ ಕೆಲವು ದಿನ ಕಳೆಯಲು ಈ ಹಬ್ಬ ಸಹಕಾರಿಯಾಗಿದೆ. ಹೆಣ್ಣುಮಕ್ಕಳು ಗೌರಿಗುಡಿಗೆ ಹೋಗಿ ಪೂಜೆ ಸಲ್ಲಿಸುತ್ತಾರೆ.

ಚೌತಿಯಂದು ಗಣೇಶನ ಮೂರ್ತಿಗಳನ್ನು ಪ್ರತಿಷ್ಠಾಪಿಸಿ, ಕರಟಗಳಲ್ಲಿ ಬೆಳೆಸಿದ ಜಾಗರೆಗಳನ್ನಿಟ್ಟು ಪೂಜಿಸಲಾಗುತ್ತದೆ. ಇತ್ತೀಚಿನ ದಿನಗಳಲ್ಲಿ ಸಣ್ಣ ಸಣ್ಣ ಬೀದಿಗಳಲ್ಲಿಯೂ ಗಣೇಶನನ್ನು ಪ್ರತಿಷ್ಠಾಪಿಸಿ 'ಮೈಕಾಸುರ'ನ ಕರ್ಕಷ ಧ್ವನಿಯಿಂದ ಶಬ್ದಮಾಲಿನ್ಯಕ್ಕೆ

ಕಾರಣವಾಗುತ್ತಿದೆ. ಎಳ್ಳಿನಿಂದ ಮಾಡಿದ ಚಿಗಳಿ, ಹಸಿ ಅಕ್ಕಿಯಿಂದ ಮಾಡಿದ ತಂಬಿಟ್ಟನ್ನು ವಿಶೇಷವಾಗಿ ಬಳಸುತ್ತಾರೆ. ಕೆಲವು ಕಡೆಗಳಲ್ಲಿ ಮುತ್ತೈದೆಯರನ್ನು ಮನೆಗೆ ಆಹ್ವಾನಿಸಿ ಉಡುಗೊರೆ ನೀಡುವುದುಂಟು, ಕೆಲವು ಗ್ರಾಮಗಳಲ್ಲಿ ಗೌರಿ-ಗಣೇಶನ ಹಬ್ಬದಂದು ಸತ್ತವರಿಗೆ ಎಡೆ ಮಾಡಿ ತಮ್ಮ ಬಂಧು-ಬಳಗ ಹಾಗೂ ಸ್ನೇಹಿತರನ್ನು ಕರೆದು ಔತಣ ನೀಡುತ್ತಾರೆ.

ಗುಬ್ಬಹಳ್ಳಿ ಗ್ರಾಮದಲ್ಲಿ ಗೌರಿ-ಗಣೇಶನ ಹಬ್ಬವನ್ನು ವಿಶೇಷವಾಗಿ ಆಚರಿಸುತ್ತಾರೆ. ವಿವಾಹವಾಗಿ ಹೊರ ಹೋಗಿರುವ ಹೆಣ್ಣುಮಕ್ಕಳನ್ನು ತೌರಿಗೆ ಕರೆಸಿಕೊಳ್ಳುತ್ತಾರೆ. ಗೌರಿಹಬ್ಬದ ದಿನ ಹೆಣ್ಣುಮಕ್ಕಳು ಮುಂಜಾನೆ ಬೇಗನೆ ಎದ್ದು ಸ್ನಾನ ಮುಗಿಸಿ ಹೊಸ ವಸ್ತ್ರಗಳನ್ನು, ಹೊಸ ಬಳೆಗಳನ್ನು ಧರಿಸಿ ಭಕ್ತಿ ಗೌರವಗಳಿಂದ ಗೌರಮ್ಮನನ್ನು ಪೂಜಿಸುವ ಮೂಲಕ ಇಷ್ಟಾರ್ಥಗಳನ್ನು ಕರುಣಿಸೆಂದು ಕೇಳಿಕೊಳ್ಳುತ್ತಾರೆ. ಗಣೇಶನಹಬ್ಬ ಗಂಡಸರ ಹಬ್ಬ. ಅಂದು ಕೆಲವರ ಮನೆಗಳಲ್ಲಿ ಪುಟ್ಟ ಪುಟ್ಟ ಗಣೇಶನ ಮೂರ್ತಿಗಳನ್ನಿಟ್ಟು ಪೂಜಿಸುತ್ತಾರೆ. ಊರಿನ ಕೆಲವು ಯುವಕರು ಒಟ್ಟಾಗಿ ಗ್ರಾಮದ ಮುಂದೆ ಪೆಂಡಾಲ್ ಹಾಕಿ ಗಣೇಶನನ್ನು ಕೂರಿಸಿದ ಉದಾಹರಣೆಗಳಿವೆ. ಹೀಗೆ ಗುಬ್ಬಹಳ್ಳಿಯಲ್ಲಿ ಗೌರಿ-ಗಣೇಶನ ಹಬ್ಬವನ್ನು ಆಚರಿಸುತ್ತಾರೆ.

**ದೀಪಾವಳಿ ಹಬ್ಬ**

ನರಕಚತುರ್ದಶಿ ಮತ್ತು ಬಲಿಪಾಡ್ಯಮಿಯ ಸಂಕೇತವಾಗಿ ಬರುವ ದೀಪಾವಳಿಹಬ್ಬ ಜನಪದರಲ್ಲಿ 'ದೀವಳಿಗೆ ಹಬ್ಬ' ವೆಂದೇ ಪ್ರಚಲಿತವಾಗಿದೆ. ಕೆಲವು ಕಡೆ ಹೊಸ ಮಡಕೆ ತೆಗೆದುಕೊಂಡು ವಿಶೇಷವಾಗಿ ಕಜ್ಜಾಯದ ಊಟ ಮಾಡುವ ಪದ್ಧತಿಯಿದೆ. ಈ ಹಬ್ಬದ ಕಾಲದಲ್ಲಿ ಹೊಲ, ಗದ್ದೆಗಳು ಹಸಿರಿನ ಸಂಭ್ರಮದಿಂದ ಕೂಡಿರುತ್ತವೆ. ಹೊಲಗಳಲ್ಲಿ ಹುಚ್ಚೆಳ್ಳು ಗಿಡಗಳು ಸೊಂಪಾಗಿ ಬೆಳೆದು ಹಳದಿ ಬಣ್ಣದ ಹೂಗಳನ್ನು ಧರಿಸಿರುತ್ತವೆ. ಮನೆಮನೆಗಳ ಮುಂದೆ ಜಗಲಿಗಳಲ್ಲಿ ದೀಪವನ್ನಿಡಲು ಸಗಣಿಯ ಉಂಡೆಯನ್ನಿಟ್ಟು ಅದರ ಸುತ್ತಲೂ ಹುಚ್ಚೆಳ್ಳು ಹೂವುಗಳನ್ನು ಅಂಟಿಸಿರುತ್ತಾರೆ. ಸಗಣಿಯ ಉಂಡೆಯ ನೆತ್ತಿಯ ಮೇಲೆ ದೀಪವನ್ನಿಡುವುದರಿಂದ ಹಳದಿ ಹೂವಿನ ನಡುವೆ ಉರಿವ ಹೊನ್ನಿನ ಜ್ಯೋತಿ ಮನೋಹರವಾಗಿ ತೋರುತ್ತದೆ. ಈ ಹಬ್ಬದಲ್ಲಿ ದೀಪಗಳಿಗಿಂತ ಹೆಚ್ಚಾಗಿ ಪಟಾಕಿಗಳದ್ದೇ ಹಾವಳಿ.

ಈ ದೀಪಾವಳಿ ಹಬ್ಬವನ್ನು ಗುಬ್ಬಹಳ್ಳಿಯಲ್ಲಿ ಸಂಭ್ರಮ, ಸಡಗರದಿಂದ ಆಚರಿಸುತ್ತಾರೆ. ಬೆಳಗ್ಗೆ, ತಮ್ಮ ತಮ್ಮ ಮನೆಗಳ ಮುಂದಿನ ರಂಗೋಲಿಯನ್ನು ಹುಚ್ಚೆಳ್ಳಿನ ಹೂವುಗಳಿಂದ ಅಲಂಕರಿಸಿರುತ್ತಾರೆ. ಸುತ್ತಲೂ ದೀಪಗಳನ್ನಿಟ್ಟು, ಮಧ್ಯದಲ್ಲಿಯೂ ದೀಪವನ್ನಿಟ್ಟು ಮನೆಯ ಮುಂದೆ ಶೋಭಾಯಮಾನವಾಗಿ ಕಾಣುವಂತೆ ಮಾಡಿರುತ್ತಾರೆ.

ಗ್ರಾಮದ ದೇವಾಲಯಗಳಲ್ಲಿ ವಿಶೇಷ ಪೂಜೆ ನಡೆಯುತ್ತದೆ. ಆ ದಿನ ಪಟಾಕಿಗಳ ಕಿವಿಗಡಚಿಕ್ಕುವ ಸದ್ದು ಗ್ರಾಮದ ತುಂಬ ತುಂಬಿ ಹೋಗಿರುತ್ತದೆ.

**ಶಿವರಾತ್ರಿ**

ಮಾಘಮಾಸದ ಕೊನೆ ಕೊನೆಗೆ 'ಮಹಾಶಿವರಾತ್ರಿ' ಹಬ್ಬ ಬರುತ್ತದೆ. ಈ ಹಬ್ಬದಲ್ಲಿ ವಿಶೇಷವಾಗಿ 'ಜಾಗರಣೆ' ಉಪವಾಸ ವ್ರತಗಳಿಂದ ಶಿವನನ್ನು ಆರಾಧಿಸುವ ಪದ್ಧತಿ ಬೆಳೆದು ಬಂದಿದೆ. ರಾತ್ರಿಯಿಡೀ 'ಹರಿಕಥೆ'ಯನ್ನು ಕೇಳುತ್ತಾ 'ಜಾಗರಣೆ'ಗೆ ಒತ್ತು ಕೊಡುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ವಿಡಿಯೋ ನೊಡುತ್ತಾ ಇಸ್ಪೀಟು ಆಡುತ್ತಾ ನಿದ್ರೆಗೆಡುವ ಪ್ಯಾಷನ್ ಜನಪ್ರಿಯವಾಗತೊಡಗಿದೆ.

ಗುಬ್ಬಹಳ್ಳಿಯಲ್ಲಿ ಶಿವರಾತ್ರಿ ಹಬ್ಬವನ್ನು ವಿಶೇಷವಾಗಿ ಆಚರಿಸುತ್ತಾರೆ. ಅಂದು ಊರಿನ ದೇವಾಲಯಗಳಲ್ಲಿ ವಿಶೇಷ ಪೂಜೆಯನ್ನು ಏರ್ಪಡಿಸಿರುತ್ತಾರೆ. ಕೆಲವು ನೇಮ–ನಿಷ್ಠೆಯುಳ್ಳವರು ಉಪವಾಸವಿದ್ದು ರಾತ್ರಿಯಿಡಿ ಜಾಗರಣೆ ಮಾಡುತ್ತಾರೆ. ಕೆಲವು ಸಲ ಈ ಶಿವರಾತ್ರಿ ಹಬ್ಬಕ್ಕೆ ನಾಟಕ ಕಲಿತು ನಾಟಕ ಆಡಿದ ಸಂದರ್ಭಗಳೂ ಉಂಟು.

ಈ ಮೇಲ್ಕಂಡಂತೆ ಗುಬ್ಬಹಳ್ಳಿಯ ದೇವಾಲಯಗಳು, ಉತ್ಸವಗಳು ಮತ್ತು ಹಬ್ಬಗಳನ್ನು ನೋಡಬಹುದಾಗಿದೆ.

## ಅಧ್ಯಾಯ ನಾಲ್ಕು

# ಗುಬ್ಬಹಳ್ಳಿಯ ವಿಶೇಷ ನಂಬಿಕೆಗಳು ಮತ್ತು ಸಂಪ್ರದಾಯಗಳು

### ನಂಬಿಕೆ

ನಂಬಿಕೆ ಎಂದರೆ ಒಂದು ಹೇಳಿಕೆ ಅಥವಾ ವಸ್ತು ಸ್ಥಿತಿಯ ಬಗ್ಗೆ ಮಾನಸಿಕ ಒಪ್ಪಿಗೆಯನ್ನು ತೋರುವ ಪ್ರವೃತ್ತಿ. ಜನಪದರ ಜೀವನದಲ್ಲಿ ಹಾಸುಹೊಕ್ಕಾಗಿರುವ ಈ ನಂಬಿಕೆಗಳು ಜನತೆಯ ಮನೋಭಾವ ಹಾಗೂ ಆದಿಮ ಸಂಸ್ಕೃತಿ ಮತ್ತು ಸಂಪ್ರದಾಯಗಳನ್ನು ಪರಿಚಯಿಸುವ ಪ್ರಮುಖ ಸಾಧನಗಳಾಗಿವೆ. ಎಷ್ಟೋ ವೇಳೆ ಇವು ಜನಪದರ ಬಾಳನ್ನೇ ನಿರ್ದೇಶಿಸುತ್ತವೆ ಎಂದರೆ ಅತಿಶಯೋಕ್ತಿಯಾಗಲಾರದು. ಪ್ರಪಂಚದಾದ್ಯಂತ ಕಂಡುಬರುವಂತೆ, ನಂಬಿಕೆಗಳು ಕರ್ನಾಟಕದಲ್ಲೂ ಕಂಡುಬರುತ್ತವೆ. ಹೀಗೆ ಕಂಡುಬರುವ ನಂಬಿಕೆಗಳಲ್ಲಿ ವೈಜ್ಞಾನಿಕ ಸತ್ಯ, ಸಾಮಾನ್ಯ ಜ್ಞಾನ, ಪೌರಾಣಿಕ, ಐತಿಹ್ಯಗಳು ಹಾಗೂ ಹಲವು ಬಗೆಯ ಕತೆಗಳು ಅಡಕವಾಗಿವೆ. ಜನಪದ ನಂಬಿಕೆಗಳ ಉಗಮ ಮುಖ್ಯವಾಗಿ ಮೂರು ರೀತಿಯಲ್ಲಿ ಆಯಿತೆನ್ನಬಹುದು. ಧಾರ್ಮಿಕ, ಸಾಂಸ್ಕೃತಿಕ ಹಾಗೂ ವೈಯಕ್ತಿಕ, ಧಾರ್ಮಿಕ ನಂಬಿಕೆಗಳು ಭಯದಿಂದ ಹುಟ್ಟಿದವು. ಮನಸ್ಸಿನ ಅಸ್ಥಿರತೆ ಮತ್ತು ಅತಿಮಾನುಷ ಭಯ ಈ ವರ್ಗದ ನಂಬಿಕೆಗಳ ಹುಟ್ಟಿಗೆ ಮುಖ್ಯ ಕಾರಣ, ಭೂತಾರಾಧನೆ, ಪಿತೃಪೂಜೆ, ದೇವತೆಗಳ ಆರಾಧನೆ, ಕುಲದೇವತಾ ಪದ್ಧತಿ ಇತ್ಯಾದಿಗಳಿಗೆ ಸಂಬಂಧಿಸಿದ ನಂಬಿಕೆಗಳು ಈ ಗುಂಪಿನಲ್ಲಿ ಸೇರುತ್ತವೆ. ಜನ ತಮ್ಮ ಸಂಸ್ಕೃತಿಯನ್ನು ರೂಪಿಸಿಕೊಳ್ಳುವಾಗ ಅವರ ಚಟುವಟಿಕೆಗಳಿಗೆ ತಕ್ಕಂತೆ ಈ ಕೆಲವು ನಂಬಿಕೆಗಳು ರೂಪತಾಳಿದವು. ವೈಯಕ್ತಿಕ ನಂಬಿಕೆಗಳು ಧಾರ್ಮಿಕ ಹಾಗೂ ಸಾಂಸ್ಕೃತಿಕ ನಂಬಿಕೆಗಳ ಸಂಸ್ಕಾರದಿಂದ ಒಬ್ಬ ವ್ಯಕ್ತಿಯಲ್ಲಿ ಕಾಣಿಸಿಕೊಳ್ಳುತ್ತವೆ. ಇವು ಸಾರ್ವತ್ರಿಕವಾದರೂ ವ್ಯಕ್ತಿಯಿಂದ ವ್ಯಕ್ತಿಗೆ ಬೇರೆಯಾಗಬಹುದು. ನಂಬಿಕೆಗಳಲ್ಲಿ ಸಾರ್ವತ್ರಿಕತೆ ಮತ್ತು ಪ್ರಾದೇಶಿಕತೆ ಕಂಡುಬರುತ್ತದೆ. ನಂಬಿಕೆಗಳನ್ನು ಅಧ್ಯಯನದ ದೃಷ್ಟಿಯಿಂದ ಸ್ಥೂಲವಾಗಿ ವೈಜ್ಞಾನಿಕ, ಅವೈಜ್ಞಾನಿಕ ಎಂದು ವಿಭಜಿಸಬಹುದು. ಅಲ್ಲದೆ ಮಾನುಷ ಅತಿಮಾನುಷ, ಪ್ರಾಣಿ, ಪ್ರಕೃತಿ, ಕೌಟುಂಬಿಕ ಹಾಗೂ ಸಂಕೀರ್ಣ ಸಂಬಂಧದವು ಎಂದು ವಿಭಜಿಸಬಹುದು. ಜನಪದರಲ್ಲಿ ನಂಬಿಕೆ ಒಂದು ಬದುಕಿನ ಕ್ರಮವಾಗಿರುತ್ತದೆ. ಇಂಥ ನಂಬಿಕೆಗಳಿಗೆ ಆಚರಣೆಯ ಭಾಗವೂ ಸಹಜವಾಗಿ ಸ್ಥಾಪಿತವಾಗುತ್ತದೆ. ಇಲ್ಲಿ ಜನಪದರ ಬದುಕಿನ ಸಾಮಾನ್ಯತೆ ಮತ್ತು ಮೌಢ್ಯತೆಯೂ ಒಟ್ಟೊಟ್ಟಿಗೇ ಇರುತ್ತದಾದರೂ ನಂಬಿಕೆ ಜನಪದ ಜೀವನ ಧೋರಣೆಯೇ ಆಗಿದೆ.

## ಸಂಪ್ರದಾಯ

ಸಂಪ್ರದಾಯಗಳಿಲ್ಲದೆ ಸಮಾಜವಿಲ್ಲ; ಸಂಸ್ಕೃತಿಯಿಲ್ಲ. ಅವು ಮಾನವ ಬದುಕಿನ ಉದ್ದಗಲಕ್ಕೂ ಹರಡಿಕೊಮಡಿವೆ. ತಲತಲಾಂತರಗಳಿಂದ ಬಂದ ನಮ್ಮ ಹಿರಿಯರ ಧಾರ್ಮಿಕ ಪರವಾದ ಆಚಾರವಿಚಾರ, ನಡೆನುಡಿಗಳನ್ನು ಚಾಚುತಪ್ಪದೇ ಒಂದು ಕೇರಿ ಅಥವಾ ಒಂದು ಊರು ಅಥವಾ ಒಂದು ನಾಡಿನಲ್ಲಿ ವಾಸಿಸುವ ಜನಸಮೂಹವು ಒಟ್ಟುಗೂಡಿ ಆಚರಿಸುವಾಗ ಉಂಟಾಗುವ ಸಂಸ್ಕೃತಿಯ ಮೊತ್ತವನ್ನು 'ಸಂಪ್ರದಾಯ' ಎಂದು ಕರೆಯಬಹುದು. ತಲೆಮಾರಿನಿಂದ ತಲೆಮಾರಿಗೆ ಸಮಾಜದಲ್ಲಿ ಮುಂದುವರಿಯುವ ವಿಶಿಷ್ಟ ವಿಧಿ. ಉಪಾಸನೆ ಮತ್ತು ಪದ್ಧತಿಗಳು ಇಲ್ಲಿ ಸೇರಿಕೊಂಡಿರುತ್ತವೆ. ಜನತೆಯ ಮನೋಭಾವ, ಅಭಿಪ್ರಾಯ, ರೂಢಿ, ವಾಡಿಕೆ ಇವುಗಳ ಒಟ್ಟು ಮೊತ್ತವನ್ನು ಸಂಪ್ರದಾಯವೆಂದು ಕರೆಯಬಹುದು. ಇದು ಜಾನಪದ ಒಂದು ಪ್ರಕಾರವಾಗಿದೆ. ಪ್ರಾಚೀನ ಕಾಲದಿಂದಲೂ ಮಾನವ ಕೆಲವು ನಂಬಿಕೆಗಳಿಂದ ಬದುಕಿದ್ದಾನೆ. ಈ ನಂಬಿಕೆಗಳೇ ಸಂಪ್ರದಾಯಗಳ ಸೃಷ್ಟಿಗೆ ಕಾರಣವಾಗುತ್ತವೆ. ಅವು ಒಂದೊಂದು ಸಮಾಜಕ್ಕೂ ಬೇರೆ ಬೇರೆಯಾಗಿರುತ್ತವೆ. ಸಂಪ್ರದಾಯವು ಸಾಮೂಹಿಕ ಆಚರಣೆಯಿಂದ ಪರಂಪರಾಗತವಾಗಿ ಬೆಳೆದು ಸಮಾಜವನ್ನು ತನ್ನ ಹಿಡಿತದಲ್ಲಿಟ್ಟುಕೊಂಡು ಬಂದಿದೆ. ಸಂಪ್ರದಾಯವು ಮಾನವ ಬದುಕಿನಲ್ಲಿ ಅನೇಕ ನಿಯಮ, ಸಂಯಮಗಳನ್ನು ಪಲಿಸಲು ಅವಕಾಶವೀಯುತ್ತ ಬಂದಿದೆ. ಜನಪದರೇ ರೂಪಿಸಿಕೊಂಡಂಥ ಇಂಥ ಕಟ್ಟು ನಿಟ್ಟಿನಿಂದಾಗಿ ಪ್ರಜೆಗಳ ನಡುವೆ ನಿಯಮೋಲ್ಲಂಘನೆಯಾಗದ ಹಾಗೆ ಅಪ್ರಜ್ಞಾಪೂರ್ವಕವಾಗಿ ನಿಯಂತ್ರಣ ಸಾಧ್ಯವಾಗಿ ಎಲ್ಲ ಆಗುಹೋಗುಗಳು ಸುಸೂತ್ರವಾಗಿ ನಡೆದುಕೊಂಡು ಬರುತ್ತಿವೆ. ಸಂಪ್ರದಾಯವು ಪ್ರಮುಖವಾಗಿ ಜನಪದ ನಂಬಿಕೆಗಳು, ವೈದ್ಯ, ವಿನೋದ, ವ್ಯವಸಾಯ, ನ್ಯಾಯ, ಸಹಕಾರ ಮನೋಭಾವ, ಪಡೆನುಡಿ, ಭಯಭಕ್ತಿ ಈ ಮುಂತಾದವುಗಳನ್ನು ತನ್ನ ತೆಕ್ಕೆಯೊಳಗೆ ಸೇರಿಸಿಕೊಂಡು ಅವಕ್ಕೆ ಆಗಾಗ ಜೀವ ತುಂಬಿ ತನ್ನ ಪ್ರಭಾವವನ್ನು ಸಮಾಜದ ಮೇಲೆ ಬೀರುತ್ತಿರುತ್ತದೆ.

ವಿವಿಧ ಬಗೆಯ ಸಮಾಜಗಳನ್ನು ಅಮೂಲಾಗ್ರವಾಗಿ ಅಭ್ಯಾಸ ಮಾಡಿದ ಮಾನವ ಶಾಸ್ತ್ರಜ್ಞರು ಮಾನವ ಪ್ರಪಂಚವನ್ನು ಮೂರು ವಿಧಗಳಾಗಿ ವಿಂಗಡಿಸಿದ್ದಾರೆ. ೧. ನಾಗರಿಕ ಸಮಾಜ, ೨) ಗ್ರಾಮೀಣ ಸಮಾಜ, ೩) ಸಂಕೀರ್ಣ ಸಮಾಜ. ಅತ್ತ ನಾಗರಿಕವೂ ಅಲ್ಲದ ಇತ್ತ ಗ್ರಾಮೀಣವೂ ಅಲ್ಲದ ಅವೆರಡರ ಕಲಬೆರಕೆಯಾದುದೇ ಸಂಕೀರ್ಣಸಮಾಜ. ಗ್ರಾಮೀಣ ಜೀವನ ಸರಳವಾದುದು. ಅಲ್ಲಿ ಆಡಂಬರದ ಗಾಳಿ ಸುಳಿಯದು. ಅವರು ಸಂಪ್ರದಾಯ ಬದ್ದರು. ಹುಟ್ಟಿಸಿದ ದೇವರು ಹುಲ್ಲು ಮೇಯಿಸುವನೆಂದು ದೇವನನ್ನೇ ನಂಬಿ ನಡೆಯುವುದೇ ಅವರ ಜೀವನದ ಗುರಿ. ಅವರ ಬಾಯಿ ಒರಟಾದರೂ ಹೃದಯ ಮೃದು ಮಧುರ.

ಜನಪದ ಜೀವನವಿದ್ದಂತೆ ಜನಪದ ಸಂಸ್ಕೃತಿ 'ಬುದ್ಧಿಗೆ ತಕ್ಕ ಲದ್ದಿ' ಎನ್ನುವ ಗಾದೆಯಂತೆ ಗ್ರಾಮೀಣರು ಜೀವಿಸಿದಂತೆ ಅವರ ಸಂಸ್ಕೃತಿ ಇರುತ್ತದೆ. ಗ್ರಾಮೀಣರ ಮಾತುಕತೆ, ನಡವಳಿಕೆ, ನಂಬಿಕೆಗಳ ಮೇಲೆ ಅದು ರೂಪುಗೊಳ್ಳುತ್ತದೆ. ಅದರಲ್ಲಿ ನಂಬಿಕೆಗೆ ಹೆಚ್ಚು ಪ್ರಾಧ್ಯಾನ್ಯತೆ. ಅದು ಎಷ್ಟೋ ಸಲ ಮೂಢನಂಬಿಕೆ ಆಗಿರಬಹುದು. ಅದನ್ನೇ ನಂಬಿ ಅವರು ಆಚರಿಸುವರು. ಬಸುರಿ ಹಾವು ನೋಡಬಾರದು, ಮಗುವನ್ನು ಕಾಲಿನಿಂದ ಮುಟ್ಟಬಾರದು, ತೊಲೆಯ ಕೆಳಗೆ ಮಲಗಬಾರದು, ಬಾಗಿಲ ಹೊಸ್ತಿಲ ಮೇಲೆ ನಿಂತು ಸೀನಬಾರದು, ಒಂಟಿ ಸೀನು ಒಳ್ಳೆಯದಲ್ಲ, ಬೆಕ್ಕು ಅಡ್ಡ ಹಾಯಬಾರದು, ಕಾಗೆ ಎಡಗಟ್ಟಬಾರದು, ಹಂಗ ಬಲಗಟ್ಟಬಾರದು ಹೀಗೆ ನೂರಾರು ನಂಬಿಕೆಗಳನ್ನು ಇಟ್ಟುಕೊಂಡು ಅವರು ಬಾಳುತ್ತಾರೆ. ಅದರಂತೆ ನಡೆಯಲು ಯತ್ನಿಸುತ್ತಾರೆ.

ನಮ್ಮ ಅಧ್ಯಯನದ ವಿಷಯವಾದ ಗುಬ್ಬಹಳ್ಳಿಯಲ್ಲಿಯೂ ಈ ರೀತಿಯಾದ ಕೆಲವು ವಿಶೇಷ ನಂಬಿಕೆಗಳು ಮತ್ತು ಸಂಪ್ರದಾಯಗಳು ಕಂಡುಬರುತ್ತವೆ. ಅವುಗಳನ್ನು ಈ ಕೆಳಗೆ ವಿಶ್ಲೇಷಿಸಲಾಗಿದೆ.

ಮೊದಲನೆಯದಾಗಿ ಗುಬ್ಬಹಳ್ಳಿಗ್ರಾಮದಲ್ಲಿ ಕುಂಬಾರ ಜನಾಂಗದವರು ಮತ್ತು ಹರಿಜನರು ಇರುವಂತಿಲ್ಲ ಎಂಬ ನಂಬಿಕೆ ಹಾಗೂ ಸಂಪ್ರದಾಯ ಆಚರಣೆಯಲ್ಲಿದೆ. ಹಾಗೂ ಇಂದಿಗೂ ಈ ಗ್ರಾಮದಲ್ಲಿ ಕುಂಬಾರರು ಹಾಗೂ ಹರಿಜನರು ವಾಸಿಸುತ್ತಿಲ್ಲ. ಇದು ನನಗೊಂದು ಪ್ರಶ್ನೆಯಾಗಿ ಕಂಡಿತು. ಇದರ ವಿಷಯವಾಗಿ ತಿಳಿಯಲು ಹೊರಟ ನನಗೆ ಅಲ್ಲಿಯ ಜನರಿಂದ ಕೆಲವು ಮಾಹಿತಿಗಳು ದೊರಕಿದವು.

**ಕುಂಬಾರರು ಏಕೆ ಈ ಗ್ರಾಮದಲ್ಲಿ ವಾಸಿಸುತ್ತಿಲ್ಲ?**

ಕುಂಬಾರ ಜನಾಂಗದವರ ಕುಲಕಸುಬು ಮಡಿಕೆ, ಕುಡಿಕೆ ಹಾಗೂ ನಾಡಹೆಂಚು (ಕೈಹೆಂಚು)ಗಳನ್ನು ಮಾಡುವುದು. "ಹಿಂದೆ ಕುಂಬಾರ ಜನಾಂಗದವರು ಈ ಗ್ರಾಮದಲ್ಲಿ ಬಂದು ನೆಲೆಸಿದರಂತೆ, ಅಲ್ಲಿ ಅವರು ತಮ್ಮ ಕುಲಕಸುಬಿನಂತೆ ಮಡಿಕೆ, ಕುಡಿಕೆ, ನಾಡಹೆಂಚುಗಳನ್ನು ತಯಾರಿಸಿದರಂತೆ, ಆದರೆ ಈ ಗ್ರಾಮದಲ್ಲಿ (ಗುಬ್ಬಹಳ್ಳಿ) ಅವರು ಮಾಡಿದ ಮಡಿಕೆಗಳನ್ನು ಕೆಳಗೆ ಎತ್ತುಹಾಕಿದರೂ ಅವು ಒಡೆಯುತ್ತಿರಲಿಲ್ಲವಂತೆ. ಇದನ್ನು ಕಂಡ ಆ ಕುಂಬಾರ ಜನಾಂಗದವರು ಹೀಗಾದರೆ ಈ ಊರಿನಲ್ಲಿ ಒಮ್ಮೆ ನಮ್ಮಿಂದ ತೆಗೆದುಕೊಂಡ ಮಡಿಕೆಗಳು ಒಡೆಯುವುದಿಲ್ಲ. ಆದ್ದರಿಂದ ನಮಗೆ ವ್ಯಾಪಾರ ಆಗುವುದಿಲ್ಲ! ಇಲ್ಲಿ ನಾವು ಬದುಕಲು (ಏಳಿಗೆ ಅಥವಾ ಯಶಸ್ಸು) ಸಾಧ್ಯವಿಲ್ಲ ಎಂದು ಅಂದೇ ಈ ಊರನ್ನು ತೊರೆದರಂತೆ".

ಇಂದಿಗೂ ಈ ಊರಿನಲ್ಲಿ ಕುಂಬಾರ ಜನಾಂಗಕ್ಕೆ ಸೇರಿದ ಒಂದು ಕುಟುಂಬವೂ ವಾಸಿಸುತ್ತಿಲ್ಲ. ಆದರೆ ಇದರ ಪಕ್ಕದ ಗ್ರಾಮವಾದ ದುಡುಕನಹಳ್ಳಿಯಲ್ಲಿ ಹಲವಾರು

ಕುಂಬಾರ ಜನಾಂಗಕ್ಕೆ ಸೇರಿವ ಕುಟುಂಬಗಳು ವಾಸಿಸುತ್ತಿವೆ. ಇದನ್ನು ನಾನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಇದು ಒಂದು ಜನಪದರ ನಂಬಿಕೆ ಹಾಗೂ ಸಂಪ್ರದಾಯ ಇರಬಹುದು ಎನಿಸಿತು. ಕಾರಣ ಇದಕ್ಕೆ ಯಾವುದೇ ರೀತಿಯ ವೈಜ್ಞಾನಿಕ ಕಾರಣಗಳು ಇದ್ದಂತೆ ನನಗೆ ಕಂಡು ಬರಲಿಲ್ಲ.

**ಹರಿಜನರು ಏಕೆ ಈ ಗ್ರಾಮದಲ್ಲಿ ವಾಸಿಸುತ್ತಿಲ್ಲ?**

ಈ ಗುಬ್ಬಹಳ್ಳಿ ಗ್ರಾಮದಲ್ಲಿ ದೊಡ್ಡನಿಂಗಯ್ಯ ಸನ್ ಆಫ್ ಮಾಲೀರಯ್ಯ ಎಂಬುವವರಿಗೆ ಸೇರಿದ ಆರು ಎಕರೆ ಒಂಬತ್ತು ಗುಂಟೆ ಜಮೀನು ಇದೆ. ಇದನ್ನು 'ಕುಳವಾಡಿ ಜಮೀನು' ಎಂದೇ ಈಗಲೂ ಕರೆಯುತ್ತಾರೆ. ಆದರೆ ಈ ಜಮೀನಿನ ವಾರಸುದಾರನಾದ ದೊಡ್ಡನಿಂಗಯ್ಯ ಈಗ ಗುಬ್ಬಹಳ್ಳಿ ಗ್ರಾಮದಲ್ಲಿ ವಾಸಿಸುತ್ತಿಲ್ಲ ಪಕ್ಕದ ಗ್ರಾಮವಾದ ಸಾಕ್ಷಿಬೀಡಿನಲ್ಲಿ ಈ ದೊಡ್ಡನಿಂಗಯ್ಯ ಎಂಬುವವರು ವಾಸಮಾಡುತ್ತಿದ್ದಾರೆ. ಮತ್ತು ತಮ್ಮ ಗುಬ್ಬಹಳ್ಳಿಯ ಜಮೀನನ್ನು ಬೇರೆಯವರಿಗೆ ವಾರಕ್ಕೆ ಮಾಡಲು ಬಿಟ್ಟುಬಿಟ್ಟಿದ್ದಾರೆ. ಅಷ್ಟೇ ಅಲ್ಲದೆ ಈ ಗುಬ್ಬಹಳ್ಳಿಯಲ್ಲಿ ಬೇರೆ ಯಾರೂ ಹರಿಜನಕ್ಕೆ ಸೇರಿದ ಕುಟುಂಬಗಳು ಇಲ್ಲಿ ವಾಸಮಾಡುತ್ತಿಲ್ಲ.

ಇದು ನನಗೊಂದು ಪ್ರಶ್ನೆಯಾಗಿ ಕಾಡಿತು. ಈ ಊರಿನಲ್ಲಿ ಕುಳವಾಡಿ ಜಮೀನಿದೆ. ಆದರೆ ಆ ವ್ಯಕ್ತಿ ಈ ಗ್ರಾಮದಲ್ಲಿ ಏಕೆ ಒಕ್ಕಲಾಗಿ ನೆಲೆಸಿಲ್ಲ? ಅಲ್ಲದೆ ಈ ಊರಿನಲ್ಲಿ ಹರಿಜನರಿಗೆ ಸೇರಿದ ಒಂದೂ ಕುಟುಂಬವೂ ಏಕೆ ವಾಸ ಮಾಡುತ್ತಿಲ್ಲ? ಎಂಬ ಪ್ರಶ್ನೆಗಳು ಕಾಡತೊಡಗಿದವು. ಇದಕ್ಕೆ ಕಾರಣಗಳನ್ನು ತಿಳಿಯಲು ಮುಂದಾದ ನನಗೆ ಈ ಕೆಳಗಿನಂತೆ ಒಂದೊಂದಾಗಿ ಕಾರಣಗಳು ತಿಳಿಯತೊಡಗಿದವು. ಅವುಗಳನ್ನು ಈ ಕೆಳಗಿನಂತೆ ಒಂದೊಂದಾಗಿ ನೋಡಬಹುದಾಗಿದೆ.

ಮೊದಲನೆಯದಾಗಿ, "ಹಿಂದೆ ಒಂದು ಕಾಲದಲ್ಲಿ ಹರಿಜನರಿಗೆ ಸೇರಿದ ಕುಟುಂಬವೊಂದು ಈ ಗ್ರಾಮದಲ್ಲಿ ಇದ್ದರಂತೆ, ಕೆರೆಯ ಬಳಿಯ ದೇವೀರಮ್ಮನ ಉತ್ಸವದ ಸಂದರ್ಭದಲ್ಲಿ ದೇವರನ್ನು ನೋಡಲು ಆ ಹರಿಜನಕ್ಕೆ ಸೇರಿದ ಮನೆಯಾತ ಬಂದಾಗ ಅವರ ಮನೆಗೆ ಬೆಂಕಿಬಿದ್ದು ಸುಟ್ಟುಹೋಯಿತಂತೆ, ಇದರಿಂದ ಅವರು ಈ ಊರನ್ನು ಬಿಟ್ಟುಬಿಟ್ಟರಂತೆ."

ಎರಡನೆಯದಾಗಿ "ಹಿಂದೆ ಹರಿಜನರಿಗೆ ಸೇರಿದ ಅಧಿಕಾರಿಯೊಬ್ಬರು ಈ ಗ್ರಾಮಕ್ಕೆ ಬಂದಿದ್ದರಂತೆ ಅವರು ಈ ಕೆರೆ ಏರಿಯ ಮೇಲೆ ದೇವೀರಮ್ಮನ ಗುಡಿಯ ಮುಂಭಾಗದಲ್ಲಿ ಹಾದು ಹೋಗುತ್ತಿದ್ದಾಗ ಆ ಊರಿನ ಗ್ರಾಮಸ್ಥರು ಇಲ್ಲಿ ಹರಿಜನರು ಓಡಾಡ ಬಾರದು ಎಂದು ಹೇಳಿ ಎಚ್ಚರಿಸಿದರಂತೆ, ಆದರೆ ಅದನ್ನು ಧಿಕ್ಕರಿಸಿದ ಆ ಅಧಿಕಾರಿ ಆ ಮಾರ್ಗವಾಗಿಯೇ ಕೆರೆಯ ಏರಿಯ ಮೇಲೆ ದೇವೀರಮ್ಮನ ಗುಡಿಯ ಮುಂಭಾಗ ಬಂದಾಗ

ವಾಂತಿ, ಬೇದಿ ಪ್ರಾರಂಭವಾಯಿತಂತೆ. ಆಗ ಆ ಅಧಿಕಾರಿಯು ದೇವೀರಮ್ಮನ ಬಳಿ ತಪ್ಪು ಮಾಡಿದ್ದಾಗಿ ಕ್ಷಮೆ ಕೇಳಿದರಂತೆ, ಆಗ ಮತ್ತೆ ಮೊದಲಿನಂತೆ ಉಷಾರಾದರಂತೆ''.

ಮೂರನೆಯದಾಗಿ, ''ದೇವೀರಮ್ಮನ ದೇವಸ್ಥಾನದ ಬಳಿಯಿರುವ ಸಾಕ್ಷಿಬೀಡು ಹಂಗರಮುದ್ದನಹಳ್ಳಿ ರಸ್ತೆಯ ದುರಸ್ಥಿಕಾರ್ಯ ನಡೆಯುತ್ತಿತ್ತಂತೆ ಆ ಕೆಲಸಕ್ಕೆ ಅಕ್ಕಪಕ್ಕದ ಊರಿನ ಕೆಲವು ಹರಿಜನರು ಆ ರಸ್ತೆ ಕೆಲಸಕ್ಕೆ ಕೂಲಿಗಾಗಿ ಬಂದಿದ್ದರಂತೆ ಅವರು ಮಧ್ಯಾಹ್ನ ಊಟ ಮಾಡಲು ತಾವು ತಂದಿದ್ದ ಊಟದ ಡಬ್ಬಿಗಳನ್ನು ತೆಗೆದುಕೊಂಡು ನೀರಿಗಾಗಿ ಕೆರೆಯ ಬಳಿ ಇರುವ ದೇವೀರಮ್ಮನ ದೇವಸ್ಥಾನದ ಬಳಿಗೆ ಊಟ ಮಾಡಲು ಹೋದರಂತೆ, ಆಗ ಅಲ್ಲಿ ಆ ದೇವಸ್ಥಾನದ ಬಳಿ ದೇವರ ಸರ್ಪವೊಂದು (ದೇವರಹಾವು) ಅವರ ಬಳಿ ಬಂದು ಅವರು ಅಲ್ಲಿ ಕುಳಿತು ಊಟಮಾಡಲು ಬಿಡಲಿಲ್ಲವಂತೆ. ಇದರಿಂದ ಗಾಬರಿಯಾದ ಆ ಹರಿಜನರು ಅಲ್ಲೆ ಹತ್ತಿರದಲ್ಲಿದ್ದ ತಮ್ಮ ಜಮೀನಿನಿಂದ ಬರುತ್ತಿದ್ದ ಅದೇ ಗ್ರಾಮದ ನಂಜುಂಡಪ್ಪನವರನ್ನು ಕರೆದು ನಡೆದ ಸಂಗತಿ ವಿವರಿಸಿ ಅವರಿಗೆ ಆ ಸರ್ಪವನ್ನು ತೋರಿಸಿದರಂತೆ, ಆದರೆ ಅದು ಅವರ ಕಣ್ಣಿಗೆ ಮಾತ್ರ ಕಾಣುತ್ತಿದ್ದು, ನಂಜುಂಡಪ್ಪನವರ ಕಣ್ಣಿಗೆ ಅದು ಕಾಣಿಸಲೇ ಇಲ್ಲವಂತೆ.''

ನಾಲ್ಕನೆಯದಾಗಿ ''ಈ ಗ್ರಾಮದ ಗ್ರಾಮಪಂಚಾಯ್ತಿ ಸದಸ್ಯರಾದ ಶಂಕರಪ್ಪನವರು(ಕುಮಾರಣ್ಣ) ಇತ್ತೀಚೆಗೆ ಒಂದು ವರ್ಷದ ಹಿಂದೆ ತಮ್ಮ ಗ್ರಾಮದ ಕುಳವಾಡಿಯಾದ ದೊಡ್ಡನಿಂಗಯ್ಯನನ್ನನ್ನು ಭೇಟಿ ಮಾಡಿ ನಮ್ಮ ಊರಿನಲ್ಲಿ ನಿಮ್ಮ ಜಮೀನಿದೆ ನೀನು ನಮ್ಮ ಊರಿನಲ್ಲಿಯೇ ಒಂದು ಒಕ್ಕಲಾಗಿರು. ನಿನಗೆ ಮನೆಗ್ರಾಂಟ್ ಮಂಜೂರು ಮಾಡಿಸಿ ಮನೆ ಕಟ್ಟಿಸಿಕೊಡುತ್ತೇವೆ ಎಂದು ಹೇಳಿದ್ದಕ್ಕೆ ಆತ ನಿಮ್ಮ ಊರಿನಲ್ಲಿ ನಾವು ವಾಸ ಮಾಡುವಂತಿಲ್ಲ. ಅಲ್ಲಿ ನಮಗೆ ಏಳಿಗೆ (ಯಶಸ್ಸು) ಇಲ್ಲ ಎಂದು ನಿರಾಕರಿಸಿದರಂತೆ''.

ಇಷ್ಟೆಲ್ಲ ಅಂಶಗಳನ್ನು ಸಂಗ್ರಹಿಸಿದ ನಾನು ಪಕ್ಕದ ಗ್ರಾಮವಾದ ಸಾಕ್ಷಿಬೀಡಿಗೆ ಹೋಗಿ ಖುದ್ದಾಗಿ ಆ ಗುಬ್ಬಹಳ್ಳಿಗ್ರಾಮಕ್ಕೆ ಸೇರಿದ ಕುಳವಾಡಿ ಮಾಲೀರಯ್ಯನ ಮಗ ದೊಡ್ಡನಿಂಗಯ್ಯನನ್ನು ಭೇಟಿಯಾಗಿ ಈ ಕೆಳಗಿನಂತೆ ಅವರನ್ನು ಪ್ರಶ್ನಿಸಿದೆ.

**ಗುಬ್ಬಹಳ್ಳಿಯಲ್ಲಿ ನಿಮಗೆ ಎಷ್ಟು ಜಮಿನಿದೆ?**

''ನಮಗೆ ಆ ಊರಿನಲ್ಲಿ ಆರು ಎಕರೆ ಒಂಬತ್ತು ಗುಂಟೆ ಜಮೀನಿದೆ. ಅದರಲ್ಲಿ ಒಂದು ಎಕರೆ ಇಪ್ಪತ್ತುಗುಂಟೆ ಕಾಲುವೆಗೆ ಹೋಗಿ ಇನ್ನು ನಾಲ್ಕು ಎಕರೆ ಇಪ್ಪತ್ತೊಂಬತ್ತು ಗುಂಟೆ ಜಮೀನು ಇದೆ.''

**ನಿಮಗೆ ಆ ಊರಿನಲ್ಲಿ ಜಮೀನಿದ್ದರೂ ನೀವು ಏಕೆ ವಾಸಮಾಡುತ್ತಿಲ್ಲ?**

"ಸ್ವಾಮಿ ನಮ್ಮ ತಂದೆಯವರು ಹೇಳುತ್ತಿದ್ದರು, ಆ ಊರಿನ ಒಂದು ಗಾದೆಯ ಪ್ರಕಾರ ನಾವು ಸಾಕಿದ ಕೋಳಿ ಆ ಊರಿನಲ್ಲಿ ಕೂಗಬಾರದಂತೆ, ಆ ಊರಿನ ಕೆರೆಕೋಡಮ್ಮ (ದೇವೀರಮ್ಮ) ದೇವಿಯ ಉತ್ಸವದ ಸಂದರ್ಭದಲ್ಲಿ ನಾವು ಎದುರಿಗೆ ಬರಬಾರದಂತೆ ಹಾಗೂ ನಾವು ಆ ದೇವರಿಗೆ ಮುಖ ತೋರಿಸಬಾರದಂತೆ ಮತ್ತು ನಾವು ಆ ಕೆರೆಯ ಏರಿಯ ಮೇಲೆ ಓಡಾಡಬಾರದಂತೆ ಒಟ್ಟಾರೆ ಆ ಊರಿನಲ್ಲಿ ನಮಗೆ ಏಳಿಗೆ (ಯಶಸ್ಸು) ಇಲ್ಲ. ಹೀಗೆ ಒಂದು ಶಾಪವೇ ಇದೆಯಂತೆ, ಆದ್ದರಿಂದ ನಾವು ಆ ಗ್ರಾಮದಲ್ಲಿ ಇರಲು ಇಚ್ಛಿಸುವುದಿಲ್ಲ."

ಹೀಗೆ ಗುಬ್ಬಹಳ್ಳಿಯಲ್ಲಿ ಹರಿಜನರು ಏಕೆ ವಾಸಮಾಡುತ್ತಿಲ್ಲ? ಎಂಬ ಪ್ರಶ್ನೆಗೆ ಗುಬ್ಬಹಳ್ಳಿಯ ಗ್ರಾಮಸ್ಥರು ಹೇಳಿದ ಹೇಳಿಕೆಗಳಿಗೂ ಹಾಗೂ ಆ ಊರಿನ ಕುಳವಾಡಿ ದೊಡ್ಡ ನಿಂಗಯ್ಯ ಹೇಳಿದ ಹೇಳಿಕೆಗಳಿಗೂ ಸಾಮ್ಯ ಕಂಡು ಬಂದಿತಾದರೂ ನನಗೆ ಈ ಎಲ್ಲಾ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಇದಕ್ಕೆ ಯಾವುದೇ ರೀತಿಯ ವೈಜ್ಞಾನಿಕ ಅಂಶಗಳು ಅಥವಾ ಕಾರಣಗಳು ಇದ್ದಂತೆ ಕಂಡುಬರಲಿಲ್ಲ. ಆದ್ದರಿಂದ ಇದು ಒಂದು ಜನಪದರ ನಂಬಿಕೆಯಾಗಿರಬಹುದು ಎನಿಸಿತು.

ಇವುಗಳಲ್ಲದೆ ಈ ಗುಬ್ಬಹಳ್ಳಿ ಗ್ರಾಮದಲ್ಲಿ ಮತ್ತೆ ಕೆಲವು ವಿಶೇಷ ನಂಬಿಕೆಗಳು ಮತ್ತು ಸಂಪ್ರದಾಯಗಳು ಕಂಡುಬರುತ್ತವೆ. ಅವುಗಳನ್ನು ಈ ಕೆಳಗೆ ವಿಶ್ಲೇಷಿಸಲಾಗಿದೆ.

ಗುಬ್ಬಹಳ್ಳಿಯ ಕೆರೆಯಲ್ಲಿ ಹೆಂಗಸರ ಬಟ್ಟೆಗಳನ್ನು ಒಗೆ (ತೊಳೆಯುವಂತಿಲ್ಲ) ಯುವಂತಿಲ್ಲ ಮತ್ತು ಗರ್ಭಧರಿಸಿದ ಗರ್ಭಿಣಿಸ್ತ್ರೀಯರು ಹಾಗೂ ಮುಟ್ಟಾದ ಸ್ತ್ರೀಯರು ಕೆರೆಏರಿಯ ಮೇಲೆ ಓಡಾಡುವಂತಿಲ್ಲ. ಇವು ನನಗೆ ಆಶ್ಚರ್ಯಕರವಾದ ನಂಬಿಕೆಗಳು ಮತ್ತು ಸಂಪ್ರದಾಯಗಳಾಗಿ ಕಂಡವು. ಇವುಗಳ ವಿಷಯವಾಗಿ ತಿಳಿಯಲು ಹೊರಟ ನನಗೆ ಅಲ್ಲಿಯ ಜನರಿಂದ ಕೆಲವು ಮಾಹಿತಿಗಳು ದೊರಕಿದವು.

**ಈ ಕೆರೆಯಲ್ಲಿ ಹೆಂಗಸರ ಬಟ್ಟೆಗಳನ್ನು ಏಕೆ ಒಗೆಯುವಂತಿಲ್ಲ?**

ಈ ಪ್ರಶ್ನೆಗೆ ಉತ್ತರವನ್ನು ತಿಳಿಯುವ ಮುನ್ನ ಗುಬ್ಬಹಳ್ಳಿಯ ಕೆರೆಯ ಬಗ್ಗೆ ಕೆಲವು ಮಾಹಿತಿಗಳನ್ನು ತಿಳಿಯುವುದು ಸೂಕ್ತ ಎನಿಸುತ್ತದೆ. ಈ ಗುಬ್ಬಹಳ್ಳಿಯ ಕೆರೆಗೆ ಒಂದು ಹೆಸರಿದೆ. ಅದೇನೆಂದರೆ, 'ಅಮ್ಮನಕೆರೆ' ಎಂದು. ಈ ಕೆರೆಗೆ ಅಮ್ಮನಕೆರೆ ಎಂದು ಹೆಸರು ಬರಲು ಕಾರಣವೇನೆಂದರೆ ಈ ಕೆರೆಗೆ ಸೇರಿಕೊಂಡಂತೆ ಇರುವ ಅಥವಾ ಕೆರೆಯ ಪಕ್ಕದಲ್ಲೇ ದೇವೀರಮ್ಮನ ದೇವಸ್ಥಾನ ಇರುವುದರಿಂದ ದೇವೀರಮ್ಮನಕೆರೆ ಎಂದು ಕರೆಯುವುದಕ್ಕೆ ಬದಲಾಗಿ ಸಂಕ್ಷಿಪ್ತವಾಗಿ ದೇವೀರ್ ಬಿಟ್ಟುಹೋಗಿ ಅಮ್ಮನಕೆರೆ ಎಂದು ಕರೆಯಲ್ಪಡುತ್ತಿದೆ.

ಇಂದಿನ ದಿನಗಳಂತೆ ಅಂದಿನ ದಿನಗಳಲ್ಲಿ ಅಂದರೆ ಬಹಳ ಹಿಂದೆ ನಲ್ಲಿ (ಕೊಳಾಯಿ)ಯ ವ್ಯವಸ್ಥೆ ಇಲ್ಲದಿದ್ದಾಗ ಜನರು ಅಂದಿನ ದಿನಗಳಲ್ಲಿ ಕುಡಿಯಲು ಈ ಅಮ್ಮನಕೆರೆಯ ನೀರನ್ನೇ ಉಪಯೋಗಿಸುತ್ತಿದ್ದರಂತೆ ಆದರೆ ಕೆಲವು ಕಾಲದ ನಂತರ ಈ ಕೆರೆಯಲ್ಲಿ ನೀರು ಸಂಪೂರ್ಣವಾಗಿ ಬತ್ತಿ (ಖಾಲಿಯಾದಾಗ) ಹೋದಾಗ, ಕುಡಿಯುವ ನೀರಿಗೆ ತುಂಬ ತೊಂದರೆಯಾಯಿತಂತೆ. ಆಗ ಗ್ರಾಮಸ್ಥರು ಅಮ್ಮನಕೆರೆಯಲ್ಲಿ ಬಾವಿ ತೋಡಿ ನೀರು ತೆಗೆದಾಗ ಆ ನೀರು ಗಂಜಲದಂತೆ ಕಶ್ಮಲದಿಂದ ಕೂಡಿದ ನೀರು ಬರುತ್ತಿತ್ತಂತೆ. ಆದ್ದರಿಂದ ಜನರು ಕಶ್ಮಲ, ಕಸಕಡ್ಡಿಗಳು ಬೀಳದಂತೆ ಕೆರೆಯ ಒಂದು ಭಾಗಕ್ಕೆ ಒಂದು ಕಟ್ಟೆಯನ್ನು ನಿರ್ಮಿಸಿಕೊಂಡು ಅಲ್ಲಿ ಕಶ್ಮಲವಸ್ತುಗಳು ಬೀಳದಂತೆ ಮಾಡಿಕೊಂಡು ಆ ಜಾಗದಲ್ಲಿ ಒಂದೊಂದು ಕೋಮಿನವರು (ಜಾತಿ,ಪಂಗಡ) ಒಂದೊಂದು ಬಾವಿ ತೋಡಿಕೊಂಡು ಉಪಯೋಗಿಸುತ್ತಿದ್ದರಂತೆ. ಹೀಗೆ ಈ ಸ್ಥಳದಲ್ಲಿ ಬಾವಿಗಳನ್ನು ತೆಗೆದಾಗ ಎಳೆನೀರಿನಂತಹ ಸ್ವಚ್ಛ ನೀರು ಆ ಬಾವಿಗಳಲ್ಲಿ ಬರಲಾರಂಭಿಸಿತಂತೆ.

ಈ ಕಾರಣದಿಂದಾಗಿ ಗುಬ್ಬಹಳ್ಳಿಯ ಒಂದೇ ಕೆರೆಯಲ್ಲಿ ಎರಡು ಭಾಗಗಳಾಗಿವೆ. ದೊಡ್ಡದಾಗಿರುವ ಆ ಕೆರೆಗೆ ಪಕ್ಕದಲ್ಲಿ ದೇವೀರಮ್ಮನ ಗುಡಿ ಇರುವುದರಿಂದ ಅದು ಅಮ್ಮನಕೆರೆ ಎಂದು ಹೆಸರು ಪಡೆದುಕೊಂಡಿದ್ದರೆ ಕಾಲಾನಂತರದಲ್ಲಿ ಚಿಕ್ಕದಾಗಿ ಅವರು ಅಂದಿನ ದಿನಗಳಲ್ಲಿ ಕುಡಿಯುವ ನೀರಿನ ಸೌಕರ್ಯಕ್ಕಾಗಿ ನಿರ್ಮಿಸಿಕೊಂಡ ಆ ಕೆರೆಯ ಒಂದು ಭಾಗವೇ ಆದ ಈ ಚಿಕ್ಕಕೆರೆಗೆ ಮತ್ತೊಂದು ಹೆಸರಿನ ನಾಮಕರಣವಾಗಿದೆ. ಅದೇನೆಂದರೆ ದೊಡ್ಡಕೆರೆಗೆ ಅಮ್ಮನಕೆರೆ ಎಂದು ಕರೆಯುವುದರಿಂದ ಅದಕ್ಕೆ ಸೇರಿದ ಭಾಗವೇ ಈ ಕೆರೆಯೂ ಆಗಿರುವುದರಿಂದ ಇದಕ್ಕೆ 'ಅಯ್ಯನಕೆರೆ' (ಅಮ್ಮ-ಅಯ್ಯ ಇವೆರಡು ಜೋಡಿಪದಗಳಾಗಿ ಅಂದು ಆ ಜನರಿಗೆ ಕಂಡಿರಬೇಕು) ಎಂಬ ಹೆಸರು ಬಂದಿದೆ.



**ಇದು ಗುಬ್ಬಹಳ್ಳಿಯ ಅಮ್ಮನ ಕೆರೆಯ ಒಂದು ದೃಶ್ಯ**

ಈಗಲೂ ಈ ಕೆರೆಗಳಿಗೆ 'ಅಮ್ಮನ ಕೆರೆ' ಹಾಗೂ 'ಅಯ್ಯನಕೆರೆ' ಎಂದೇ ಗ್ರಾಮಸ್ಥರು ಕರೆಯುತ್ತಾರೆ.



**ಇದು ಗುಬ್ಬಹಳ್ಳಿಯ ಅಯ್ಯನಕೆರೆಯ ಒಂದು ದೃಶ್ಯ**

ಈ ಎರಡೂ ಕೆರೆಗಳಲ್ಲಿ ಹೆಂಗಸರ ಬಟ್ಟೆಗಳನ್ನು ಏಕೆ ಒಗೆಯುವುದಿಲ್ಲ? ಎಂದು ನಾನು ಅಲ್ಲಿಯ ಜನರನ್ನು ಪ್ರಶ್ನಿಸಿದಾಗ ಅದಕ್ಕೆ ಅವರು ಉತ್ತರವಾಗಿ ದೇವೀರಮ್ಮನ ಹೆಸರು ಹೇಳುತ್ತಾ ಕೆರೆಕೋಡಮ್ಮನಿಗೆ ಅಂಟು, ಮುಟ್ಟು, ಮೈಲಿಗೆಗಳು ಆಗಬಾರದು. ಅದಕ್ಕೆ ಈ ಕೆರೆಗಳಲ್ಲಿ ಹೆಂಗಸರ ಬಟ್ಟೆಗಳನ್ನು ಒಗೆಯುವುದಿಲ್ಲ ಎಂದರು. ಆದರೆ ಇದು ನನಗೆ ಸರಿಯಾದ ಕಾರಣವೆಂದು ತೋರಲಿಲ್ಲ. ಹಾಗೆಂದ ಮಾತ್ರಕ್ಕೆ ಇದು ತಪ್ಪೆಂದು ನಾನು ಹೇಳುತ್ತಿಲ್ಲ. "ಭಯವೇ ಭಕ್ತಿಯ ಮೂಲವಯ್ಯ" ಎಂಬಂತೆ ದೇವೀರಮ್ಮನ ಮೇಲಿನ ಭಯ, ಭಕ್ತಿ, ಗೌರವಗಳೂ ಇದಕ್ಕೆ ಕಾರಣಗಳಿರಬಹುದು. ಆದರೆ ಇದೇ ಸರಿಯಾದ ಪೂರ್ಣ ಕಾರಣವೂ ಆಗಲಾರದು.

ಹೀಗೆ ಇಲ್ಲಿನ ಕೆರೆಗಳಲ್ಲಿ ಹೆಂಗಸರ ಬಟ್ಟೆಗಳನ್ನು ಏಕೆ ಇಂದಿಗೂ ಒಗೆಯುತ್ತಿಲ್ಲ? ಎಂಬ ಪ್ರಶ್ನೆಯ ಜೊತೆಗೆ, ಅದೇ ಗಂಡಸರ ಬಟ್ಟೆಗಳನ್ನು ಮಾತ್ರ ಏಕೆ ಒಗೆಯುತ್ತಾರೆ? ಎಂಬ ಪ್ರಶ್ನೆ ಹಾಗೂ ಕೆರೆಯಲ್ಲಿ ನೀರು ಹೆಚ್ಚಾಗಿ, ಕೆರೆ ತುಂಬಿ ಕೋಡಿಬಿದ್ದಾಗ ಮಾತ್ರ ಆ ಹರಿದು ಹೋಗುವ ಕೋಡಿನೀರಿನಲ್ಲಿ ಹೆಂಗಸರ ಬಟ್ಟೆಗಳನ್ನು ಆಗ ಅಲ್ಲಿ ಒಗೆಯಬಹುದು. ಇವೆಲ್ಲ ನನಗೆ ಪ್ರಶ್ನೆಗಳಾಗಿ ಪ್ರಶ್ನಿಸತೊಡಗಿದವು.

ಈ ಎಲ್ಲಾ ಪ್ರಶ್ನೆಗಳನ್ನು ಸೂಕ್ಷ್ಮವಾಗಿ ನಾನು ಅವಲೋಕಿಸಿದಾಗ ನನ್ನ ಅರಿವಿಗೆ ಬಂದ ಅಂಶಗಳೆಂದರೆ, ಒಂದು ಪುರುಷ ಪ್ರಧಾನ ವ್ಯವಸ್ಥೆ ಇಲ್ಲಿ ಕೆಲಸ ಮಾಡಿರಬಹುದು. ಬರೀ ಗಂಡಸರ ಬಟ್ಟೆಗಳನ್ನು ಮಾತ್ರ ಒಗೆಯಬಹುದೆಂಬ ನಿರ್ಬಂಧ ಏರುವುದರ ಮೂಲಕ ಎರಡನೆಯದಾಗಿ ಹಿಂದೆ ಅಂದಿನ ದಿನಗಳಲ್ಲಿ ಕುಡಿಯುವ ನೀರಿಗೆ ತೊಂದರೆ ಇದ್ದಾಗ ಆ ನೀರು ಕಶ್ಮಲದಿಂದ ಕೂಡಿರುತ್ತಿತ್ತು ಎಂದು ಅಲ್ಲಿಯ ಜನರೇ ಹೇಳಿದ್ದರಿಂದ; ಸ್ವಚ್ಛತೆಯ

ಕಾರಣಕ್ಕಾಗಿ ಹೆಂಗಸರ ಬಟ್ಟೆಗಳನ್ನು ಒಗೆಯುವುದು ಬೇಡವೆಂದು ನಿರ್ಬಂಧ ಏರಿರಲೂಬಹುದು. ತದನಂತರ ಈ ಸಂಪ್ರದಾಯ ಮುಂದುವರೆದಂತೆ ಇಂದಿಗೂ ಕೂಡ ಇದು ಕೆರೆಕೋಡಮ್ಮ (ದೇವೀರಮ್ಮ)ನ ಹೆಸರಿನಲ್ಲಿ, ಭಯದ ರೂಪದಲ್ಲಿ ಇಂದಿನ ದಿನಗಳಲ್ಲೂ ಇದು ಸಂಪ್ರದಾಯವಾಗಿ ಚಾಲ್ತಿಯಲ್ಲಿದೆ. ಹಾಗೆ ಗರ್ಭಿಣಿಯರು ಮತ್ತು ಮುಟ್ಟಾದ ಸ್ತ್ರೀಯರು ಈ ಕೆರೆ ಏರಿಯ ಮೇಲೆ ಓಡಾಡುವಂತಿಲ್ಲ ಎಂಬ ಸಂಪ್ರದಾಯವೂ ನನಗೆ ಪ್ರಶ್ನೆಯಾಗಿ ಕಾಡಿತು.

ಗರ್ಭಿಣಿಯರು ಮತ್ತು ಮುಟ್ಟಾದ ಸ್ತ್ರೀಯರು ಇಂದಿಗೂ ಈ ಕೆರೆಯ ಏರಿಯ ಮೇಲೆ ಏಕೆ ಓಡಾಡುವಂತಿಲ್ಲ?



**ಗುಬ್ಬಹಳ್ಳಿ ಕೆರೆ ಏರಿಯ ಒಂದು ದೃಶ್ಯ**

ಈ ಪ್ರಶ್ನೆಗೆ ಉತ್ತರ ಹುಡುಕಲು ನಾನು ಸಾಕಷ್ಟು ಪ್ರಯತ್ನಿಸಿದೆ, ಈ ಊರಿನ ಗ್ರಾಮಸ್ಥರಲ್ಲಿ ಹಲವರನ್ನು ವಿಚಾರಿಸಿದೆ. ಅದರಲ್ಲೂ ಹಿರಿಯ ತಲೆಮಾರಿನ ವಯಸ್ಸಾದ ವೃದ್ಧರನ್ನು ವಿಚಾರಿಸಿದೆ. ಆದರೆ ಇದಕ್ಕೆ ತಕ್ಕ ಉತ್ತರ ಯಾರಿಂದಲೂ ಸರಿಯಾಗಿ ಬರಲಿಲ್ಲ. ಕೆಲವರು ತಮಗೆ ಗೊತ್ತಿಲವೆಂದರು. ನಿಂಗಾಜಮ್ಮನೆಂಬ ಎಪ್ಪತ್ತೈದು ವರ್ಷದ ಅಜ್ಜಿಯೊಬ್ಬರು "ಬಹಳ ಹಿಂದಿನಿಂದಲೂ ನಡೆದು ಬಂದಿದೆ, ಈಗಲೂ ಗರ್ಬಿಣಿಯರು ಮತ್ತು ಮುಟ್ಟಾದವರು ಕೆರೆಯ ಏರಿಯ ಮೇಲೆ ಓಡಾಡುವುದಿಲ್ಲ." ಎಂಬ ಉತ್ತರವಿತ್ತರು. ಎಪ್ಪತ್ತು ವರ್ಷ ವಯಸ್ಸಾದ ಸಿ.ನಂಜಪ್ಪನವರು "ಇದು ಒಂದು ಅರ್ಥವಿಲ್ಲದ ಸಂಪ್ರದಾಯ" ಎಂದುಬಿಟ್ಟರು. ಐವತ್ತುವರ್ಷ ವಯಸ್ಸಿನ ಜವರನಾಯ್ಕರು "ಹಿಂದೆ ತಾಯಿ ಕೆರೆಕೋಡಮ್ಮ ಉಗ್ರವಾಗಿದ್ದಳಂತೆ, ಅವಳ ಉಗ್ರತೆಗೆ ಹೆದರಿ ಸಾಮಾನ್ಯವಾಗಿ

ಗರ್ಭಿಣಿಯರು, ಮುಟ್ಟಾದವರು ಕೆರೆಯೇರಿಯ ಮೇಲೆ ಓಡಾಡಲು ಹೆದರಿದರಂತೆ, ಅದು ಈಗಲೂ ನಡೆದು ಬಂದಿದೆ" ಎಂದು ಹೇಳಿದರು.

ಆದರೆ ಕೆರೆಏರಿಯ ಮೇಲೆ ಗರ್ಭಿಣಿಯರು ಹಾಗೂ ಮುಟ್ಟಾದವರು ಏಕೆ ಓಡಾಡುವುದಿಲ್ಲ? ಎಂಬ ಪ್ರಶ್ನೆ ನನ್ನಲ್ಲಿ ಪ್ರಶ್ನೆಯಾಗಿಯೇ ಉಳಿಯಿತು. ಅಲ್ಲಿಯ ಗ್ರಾಮಸ್ಥರು ನೀಡಿದ ಉತ್ತರಗಳಾವುವೂ ನನಗೆ ಸಮಂಜಸವಾಗಿ ಕಾಣಲಿಲ್ಲ. ಹಾಗೂ ಇದಕ್ಕೆ ಯಾವುದೇ ರೀತಿಯ ವೈಜ್ಞಾನಿಕ ಕಾರಣಗಳೂ ಇದ್ದಂತೆ ಕಂಡು ಬರಲಿಲ್ಲ. ಆದ್ದರಿಂದ ಈ ನಂಬಿಕೆ ಮತ್ತು ಸಂಪ್ರದಾಯ ತಲೆಮಾರಿನಿಂದ ತಲೆಮಾರಿಗೆ ಕೆರೆಕೋಡಮ್ಮನ ಹೆಸರಿನಲ್ಲಿ ಜನಪದೀಯ ಸಂಪ್ರದಾಯವಾಗಿ ಸಾಗಿ ಬಂದಿದೆ.

ಗುಬ್ಬಹಳ್ಳಿಯಲ್ಲಿರುವ ಮತ್ತೊಂದು ವಿಶೇಷ ನಂಬಿಕೆ ಮತ್ತು ಸಂಪ್ರದಾಯವೆಂದರೆ 'ಸ್ವರ್ಗದ ಬಾಗಿಲು ತೆಗೆಸುವುದು'.



**ಸ್ವರ್ಗದ ಬಾಗಿಲು ತೆಗೆಸುವ ಬಸವೇಶ್ವರ ದೇವಸ್ಥಾನದ ದೃಶ್ಯ**

ಈ ಗ್ರಾಮದಲ್ಲಿ ಯಾರಾದರೂ ಮೃತರಾದರೆ, ಮೃತವ್ಯಕ್ತಿಯ ಕುಟುಂಬದವರು ಈ ಸಂಪ್ರದಾಯವನ್ನು ಪಾಲಿಸುತ್ತಾರೆ. ಮೃತವ್ಯಕ್ತಿಯ ಕುಟುಂಬದವರು ಹನ್ನೊಂದನೆಯ ದಿನ ನಡೆಸುವ ಶ್ರಾದ್ಧ (ತಿಥಿ) ಕಾರ್ಯದ ಸಂದರ್ಭದಲ್ಲಿ ಮೊದಲು ಸೂತಕ ಕಳೆದುಕೊಳ್ಳುತ್ತಾರೆ. ಹಾಗೂ ಸತ್ತ ವ್ಯಕ್ತಿಯ ಆತ್ಮ ಸ್ವರ್ಗಕ್ಕೆ ಪ್ರವೇಶಿಸಲೆಂಬ ನಂಬಿಕೆಯೇ ಈ ಸ್ವರ್ಗದ ಬಾಗಿಲು ತೆಗೆಸುವುದು. ಅದೇಗೆಂದರೆ ಶ್ರಾದ್ಧದ ದಿನ ಎಡೆ ಇಡುವುದಕ್ಕೆ ಮೊದಲು ಊರಿನ ಬಸವೇಶ್ವರನ ಗುಡಿಯಲ್ಲಿ ಬಸವೇಶ್ವರನಿಗೆ ಹಣ್ಣು, ಕಾಯಿಗಳಿಟ್ಟು ಪೂಜಾರರ ಮೂಲಕ ಪೂಜೆ ಸಲ್ಲಿಸಿ, ಒಂದು ಈಡುಗಾಯಿ ಒಡೆದು, ದೇವರನ್ನು (ಬಸವೇಶ್ವರ) ನೋಡಿದರೆ

ಅಲ್ಲಿಗೆ ಸ್ವರ್ಗದ ಬಾಗಿಲು ತೆರೆಯಿತು ಎಂದು. ಅಲ್ಲಿಗೆ ತಮಗೆ ಅಂಟಿದ ಸೂತಕ ನಿವಾರಣೆಯಾಯಿತು ಎಂಬ ನಂಬಿಕೆ ಇಂದಿಗೂ ಗುಬ್ಬಹಳ್ಳಿಯಲ್ಲಿ ಪ್ರಚಲಿತದಲ್ಲಿದೆ. ಈ ನಂಬಿಕೆ ಹಾಗೂ ಸಂಪ್ರದಾಯ ಗುಬ್ಬಹಳ್ಳಿಯಲ್ಲಿ ಲಿಂಗಾಯಿತ ಜನಾಂಗದವರನ್ನು ಹೊರತುಪಡಿಸಿ ಉಳಿದ ಎಲ್ಲಾ ಜನಾಂಗದವರು ಆಚರಿಸುತ್ತಾರೆ. ಇದು ಒಂದು ಜನಪದ ನಂಬಿಕೆ ಹಾಗೂ ಸಂಪ್ರದಾಯವಾಗಿದೆ.

ಈ ಮೇಲ್ಕಂಡಂತೆ ಗುಬ್ಬಹಳ್ಳಿಯ ವಿಶೇಷ ನಂಬಿಕೆಗಳು ಮತ್ತು ಸಂಪ್ರದಾಯಗಳನ್ನು ವಿಶ್ಲೇಷಿಸಬಹುದಾಗಿದೆ.

## ಅಧ್ಯಾಯ ಐದು

# ಗುಬ್ಬಹಳ್ಳಿಯ ಕಲೆ ಮತ್ತು ಕಲಾವಿದರು

ಎಲ್ಲಾ ಸಮಾಜಗಳೂ ತಮ್ಮದೇ ಆದ ರೀತಿಯ, ತಮ್ಮದೇ ಆದ ಮಟ್ಟದ ಮತ್ತು ಅರ್ಥದ ಕಲೆಯನ್ನು ಹೊಂದಿರುತ್ತವೆ. ಆದರೆ ಜಗತ್ತಿನಾದ್ಯಂತ ಸಕಲ ಹಾಗೂ ಎಲ್ಲಾ ಕಾಲಗಳಲ್ಲಿರುಬಹುದಾದ ಕಲೆಗಳನ್ನು ತೆಗೆದುಕೊಂಡು ಅಭ್ಯಾಸ ಮಾಡುವಾಗ ಅವು ಮುಖ್ಯವಾಗಿ ಚಿತ್ರಕಲೆ, ಮೃದು ವಸ್ತುವಿನಿಂದ ರೂಪಿಸಿದ ಕಲೆ, ಸಂಗೀತ ಮತ್ತು ನಾಟಕ ಕಲೆಗಳ ರೂಪದಲ್ಲಿ ಕಾಣಬಹುದು. ಈ ಕಲೆಗಳನ್ನು ಮೂಡಿಸುವ ಹಿನ್ನೆಲೆ, ಉದ್ದೇಶ, ಕಲಾವಸ್ತು, ಕಲಾಕೌಶಲ್ಯ ಅಥವಾ ನಿಪುಣತೆ, ಕಲೆಗಾರನಿಗೆ ಸಮಾಜದಲ್ಲಿಯ ಸ್ಥಾನ-ಮಾನ, ಕಲೆಗಿರುವ ಸ್ಥಾನ-ಮಾನ ಇವು ಮಾತ್ರ ಸಂಸ್ಕೃತಿಯಿಂದ ಸಂಸ್ಕೃತಿಗೆ ಬದಲಾಗುತ್ತವೆ. ಅಂದರೆ, ಆದಿಮಾನವನು ಸೃಷ್ಟಿಸಿದ ಕಲೆ ಆಧುನಿಕ ಕಲಾಮಟ್ಟದ ದೃಷ್ಟಿಯಿಂದ ಭಿನ್ನವಾಗಿರಬಹುದು. ಇಲ್ಲವೇ ಆದಿಮಾನವರು ಉಪಯೋಗಿಸಿರುವ ವಿಧಾನಗಳು ಆಧುನಿಕ ಮಟ್ಟದಿಂದ ಕೆಳಗೆ ಇರಬಹುದು. ಆದರೆ ಈ ಕಲಾಕೃತಿಯು ಸೃಷ್ಟಿಯಾದಾಗ ತನ್ನ ಸೃಷ್ಟಿಕರ್ತನಿಂದ, ಸಮಾಜದಿಂದ ಹೆಚ್ಚಿನ ಪುರಸ್ಕಾರ ಹೊಂದಿದ್ದಿತೆಂಬುದನ್ನು ನಾವು ನೆನಪಿನಲ್ಲಿಡಬೇಕು. ಅಲ್ಲದೆ, ಕಲೆಯನ್ನು ಅಭ್ಯಾಸ ಮಾಡುವವರು ಯಾವಾಗಲೂ ನಾವು ವಿವಿಧ ಸಂಸ್ಕೃತಿಗೆ ಸೇರಿದ ವಿವಿಧ ಸಂಸ್ಕೃತಿ ಪ್ರದೇಶಕ್ಕೆ ಸೇರಿದ ಕಲೆಯನ್ನು ಅಭ್ಯಾಸ ಮಾಡುತ್ತಿದ್ದೇವೆಂಬುದನ್ನು ಸದಾ ಗಮನದಲ್ಲಿಟ್ಟುಕೊಳ್ಳಬೇಕು.

"ಯಾವುದೇ ಸಮಾಜದಲ್ಲಿ ಕಲೆಯು ಮೂಡಿಬರಲು ಕೆಲವೊಂದು ಹಿನ್ನೆಲೆಗಳು, ಅನುಕೂಲತೆಗಳು ಬೇಕಾಗುತ್ತವೆ. ಉದಾಹರಣೆಗೆ ದಿನನಿತ್ಯದ ಅವಶ್ಯಕತೆಗಳಾದ ಅನ್ನ, ನೀರು, ಸಂರಕ್ಷಣೆ ಇವುಗಳಿಗೆ ಅತ್ಯಂತ ತೊಂದರೆ ಇರುವ ಸಮಾಜದಲ್ಲಿ ಕಲೆ ಬೆಳೆಯಲಾರದು. ಏಕೆಂದರೆ ಜನರು ತಾವು ಜೀವಿಸಲು ಬೇಕಾಗುವ ವಸ್ತುಗಳನ್ನರಸಿ ಸದಾ ಅವುಗಳ ಅನ್ವೇಷಣೆಯಲ್ಲೇ ಇರುತ್ತಾರೆಯೇ ವಿನಾ ಸಧ್ಯಕ್ಕೆ ಉಪಯುಕ್ತವಿಲ್ಲದ ಕಲೆಯ ಕಡೆಗಲ್ಲ".[೨] ಆದರೆ ಮನುಷ್ಯ ಸ್ವಭಾವದ ಒಂದು ವೈಶಿಷ್ಟ್ಯವೆಂದರೆ ಅವರ ಅನ್ನ-ವಸತಿಗಳ ತೊಂದರೆ ನಿವಾರಣೆಯಾಯಿತೆಂದರೆ ಅವನು ಸುಮ್ಮನೆ ಕೊಡದೆ, ತನ್ನ ಲೌಕಿಕ ಲೋಕದಿಂದ ಹೊರಬಂದು ತನ್ನದೇ ಆದ ರೀತಿಯಲ್ಲಿ ಕಲೋಪಾಸನೆಯನ್ನು ಮಾಡಿದ್ದಾನೆ. ಎರಡನೆಯದಾಗಿ, ಕಲೆಯು ಯಾವಾಗಲೂ ಸಮಾಜದಲ್ಲಿಯ ಜನಸಾಮಾನ್ಯರ ಬುದ್ಧಿಮಟ್ಟಕ್ಕೆ ಅನುಗುಣವಾಗಿ ಕೆಲವೊಂದು ಸಾರಿ ಸಮಾಜದಲ್ಲಿಯ ಜನಸಾಮಾನ್ಯರ ಮಟ್ಟಕ್ಕಿಂತ ಸ್ವಲ್ಪ

---

೨. ಜನಪದ ಸಮಾಜ ಮತ್ತು ಸಂಸ್ಕೃತಿ – ಡಾ. ಕೆ.ಜಿ.ಗುರುಮೂರ್ತಿ ಪು. ೧೩೪

ಮುಂದೆ ಇರುತ್ತದೆ. ಏಕೆಂದರೆ ಪ್ರತಿ ಕಲಾಕಾರನೂ ತನ್ನ ಸಮಾಜದ ಸದಸ್ಯನಾಗಿರುತ್ತಾನೆ. ಅಲ್ಲದೆ ತನ್ನ ಕಲಾಕೃತಿಯ ವಸ್ತುವಿಗಾಗಿ ತಾನು ಕಂಡರಿಯದ ವಸ್ತುವನ್ನು ಆರಿಸಿಕೊಳ್ಳಲಾರ. ಅಲ್ಲದೆ ತಾನು ಸೃಷ್ಟಿಸಿರುವುದು ಇತರರಿಗೆಂದೇ ಇರುತ್ತದೆ. ಮತ್ತು ಸಮಾಜದಲ್ಲಿ ಜನ ಅದನ್ನು ಮೆಚ್ಚಿ ತನ್ನನ್ನು ಹೊಗಳಲಿ ಎನ್ನುವುದೂ ಅವನ ಉದ್ದೇಶ. ಅಲ್ಲದೆ, ತನ್ನ ಸಮಾಜ ಸಂಸ್ಕೃತಿಯಲ್ಲಿ ಇಲ್ಲದ್ದನ್ನು ಸೃಷ್ಟಿಸಿದರೆ ಇದನ್ನು ತಮ್ಮ ಜನ್ಮದಲ್ಲಿ ಕಂಡರಿಯದ ಜನ ತಿಳಿಯದೆ. ಇದು ಕಲಾವಿದನ ಹುಚ್ಚಾಟದ ಫಲವೆಂದು ಜರಿಯಬಹುದು. ಕಲೆಗೆ ಅವಶ್ಯಕವಾಗಿ ಬೇಕಾದ ಮತ್ತೊಂದು ವಿಷಯವೆಂದರೆ ಕಚ್ಚಾವಸ್ತು. ಕಲೆಯನ್ನು ಮೂಡಿಸಲು ಒಂದು ಮಾಧ್ಯಮ (ಮಿಡಿಯಾ) ಬೇಕು. ಇದು ಮರ, ಕಲ್ಲು, ಮಣ್ಣು, ಬಟ್ಟೆ ಹೀಗೆ ನನಾ ವಸ್ತುಗಳಾಗಿರಬಹುದು. ಈ ಮಾಧ್ಯಮವಿಲ್ಲದಿದ್ದರೆ ಕಲಾಕಾರ ತನ್ನ ಮನಸ್ಸಿನಲ್ಲಿಯ ಭಾವನೆಗಳನ್ನು ಹೊರತರಲಾರ. ಅಲ್ಲದೆ ಕಲ್ಲೇ ಸಿಗದ ಕಡೆ ಕಲ್ಲಿನಲ್ಲಿ ಅಥವಾ ಕಲ್ಲಿನ ಮೇಲೆ ಮಾಡಿದ ಕೃತಿಗಳು, ಉತ್ತಮ ಎರೇ ಮಣ್ಣು ಸಿಗದ ಕಡೆ ಮಣ್ಣಿನ ಕೃತಿಗಳು, ಮರ– ಬಿದಿರು ಸಿಗದ ಕಡೆ ಮರದಲ್ಲಿಯ ಕೆತ್ತನೆಗಳು ಹೊರಬರಲಾರವು. ಆಧುನಿಕ ಜಗತ್ತಿನಲ್ಲಿ ಸಾರಿಗೆ ಮತ್ತು ಸಂಪರ್ಕಸಾಧನಗಳ ಉಪಯೋಗದಿಂದಾಗಿ ಎಲ್ಲ ಮಾಧ್ಯಮಗಳನ್ನು ಉಪಯೋಗಿಸಿ ಮಾಡಿದ ಕಲಾಕೃತಿಗಳು ಸಿಗಬಹುದು. ಆದರೆ ಅನೇಕ ಆದಿವಾಸಿ, ಜನಪದ ಸಮಾಜಗಳಲ್ಲಿ ಈ ಅನುಕೂಲತೆಗಳಿಲ್ಲದೆ. ತಮ್ಮಲ್ಲೇ ಸಿಕ್ಕ ಯಾವುದಾದರೊಂದು ಮಾಧ್ಯಮವನ್ನು ಮಾತ್ರ ಉಪಯೋಗಿಸಿ ಕಲಾಸೇವೆ ಮಾಡಿದ್ದಾರೆ. ಇಂತಹ ಕಡೆಗಳಲ್ಲಿ ಕೇವಲ ಮರದಲ್ಲಿ, ಮಣ್ಣಿನಲ್ಲಿ, ಕಲ್ಲಿನಲ್ಲಿ ಮಾಡಿದ ಕೃತಿಗಳನ್ನು ಕಾಣಬಹುದು. ಅಲ್ಲದೆ ಕಲಾವಸ್ತುವಿನ ದೃಷ್ಟಿಯಿಂದ ಸಮಾಜವು ಇರುವ ಭೌಗೋಳಿಕ ಪ್ರದೇಶವೂ ಮುಖ್ಯ ಉದಾಹರಣೆಗೆ, ಸಮುದ್ರದಂಡೆಯಲ್ಲಿರುವ ಗುಂಪು ಸಮುದ್ರದ ತೆರೆಗಳನ್ನು, ದೋಣಿಗಳನ್ನು, ಸಮುದ್ರದ ಹಕ್ಕಿಗಳನ್ನು, ಪ್ರಾಣಿಗಳನ್ನು, ಹೀಗೆ ಸಮುದ್ರಕ್ಕೆ ಸಂಬಂಧಪಟ್ಟ ವಿಷಯಗಳನ್ನು ವಸ್ತುವಾಗಿ ತೆಗೆದುಕೊಂಡು ತನ್ನ ಕಲೆಯಲ್ಲಿ ಮೂಡಿಸಬಹುದು. ಇದೇ ರೀತಿ ಪರ್ವತ, ಕಾಡು, ನದಿ, ಜಲಪಾತ ಮುಂತಾದವುಗಳ ಹತ್ತಿರವಿರುವ ಗುಂಪುಗಳು ತಮ್ಮ ಸುತ್ತಮುತ್ತಲಿನ ಈ ವಸ್ತುಗಳನ್ನೇ ರೂಪಿಸುತ್ತದೆ. ಕೊನೆಯದಾಗಿ ಕಲೆಯ ಸೃಷ್ಟಿಯ ಉದ್ದೇಶವೇನೆಂಬುದನ್ನು ತಿಳಿಯುವುದೂ ಮುಖ್ಯ. ಆಧುನಿಕ ಸಮಾಜದಲ್ಲಿಯಂತೆ ಕಲೋಪಾಸನೆಯು ಲಾಭದಾಯಕವಾಗಿರದೆ ಸ್ವಸಂತೋಷಕ್ಕೆ, ಕಲೋಪಾಸನೆಗೆ, ಆಶ್ರಯ ಮುಂತಾದವಾಗಿರುತ್ತಿದ್ದವು ಅಥವಾ ಇವು ತಮ್ಮ ಧಾರ್ಮಿಕ ಅಥವಾ ನಿತ್ಯಜೀವನದ ಅಂಗವಾಗಿರುತ್ತಿದ್ದವು. ಹೀಗೆ ಮೂಡಿಬಂದು ಕಲೆಯು ಜನಪದ ಸಮಾಜದಲ್ಲಿ ತನ್ನದೇ ಆದ ಸ್ಥಾನ, ಗೌರವವನ್ನು ಪಡೆದಿರುತ್ತದೆ.

ಯಾವುದೇ ಸಮಾಜದಲ್ಲಿಯ ಕಲೆಯನ್ನು ತಿಳಿಯುವ ಮುನ್ನ ನಾವು ಕಲೆಯೊಂದಿಗೆ ಕಲಾಕಾರರನ್ನು ಗಮನಕ್ಕೆ ತೆಗೆದುಕೊಳ್ಳಬೇಕಾಗುತ್ತದೆ. ಈ ನಿಟ್ಟಿನಲ್ಲಿ ಗುಬ್ಬಹಳ್ಳಿಯ ಕಲೆ

ಮತ್ತು ಕಲಾವಿದರನ್ನು ಪರಿಚಯಿಸಲಾಗಿದೆ. ಗುಬ್ಬಹಳ್ಳಿಯಲ್ಲಿ ಕಂಡುಬರುವ ಕಲೆಗಳನ್ನು ಅಥವಾ ಕಲಾ ಪ್ರಕಾರಗಳನ್ನು ಐದು ರೀತಿಯಲ್ಲಿ ಗುರುತಿಸಬಹುದಾಗಿದೆ. ಅವುಗಳೆಂದರೆ,

೧. ನಾಟಕ

೨. ಸಂಗೀತ

೩. ಕೋಲಾಟ

೪. ಚಕ್ರವದಿ

೫. ಭಜನೆ

**ನಾಟಕ**

ನಾಟಕವನ್ನು ಕುರಿತು ಷೇಕ್ಸ್‌ಫಿಯರ್ ಹೀಗೆ ಹೇಳುತ್ತಾನೆ, ''All the world is a stage and all the men and women mearly players" ಎಂದು. ಅಂದರೆ ಮನುಷ್ಯನ ಜೀವನವೇ ನಾಟಕ. ವಿಶ್ವವೇ ರಂಗಮಂಟಪ ಇದರ ಮೇಲಿನ ಮನುಷ್ಯನ ಕ್ರಿಯೆಯೆ ನಾಟಕ ಎಂದು. ನಾಟಕವನ್ನು ಕುರಿತಾದ ಕಾಳಿದಾಸನ ಉಕ್ತಿ ಹೀಗಿದೆ. ''ಕಾವ್ಯೇಶು ನಾಟಕಂ ರಮ್ಯಂ'' ಎಂಬ ಉಕ್ತಿ ನಾಟಕದ ಮಹತ್ವವನ್ನು ಸಾರುತ್ತದೆ. ನಾಟಕ, ಸಂಗೀತ ಸಾಹಿತ್ಯ ಮತ್ತು ನರ್ತನಗಳ ತ್ರಿವೇಣಿ ಸಂಗಮವಾಗಿದೆ. ನಾಟಕ ಎಂಬ ಶಬ್ದ 'ನಟ್' ಎಂಬ ಧಾತುವಿನಿಂದ ಬಂದಿದೆ. ನಟ್ ಎಂದರೆ ನಟಿಸು ಎಂದು. ಇಂಗ್ಲಿಷ್‌ನ Drama ಕೆ ಸಂವಾದಿ.

ನಾಟಕದ ಮೂಲ ವಿಧಗಳೆಂದರೆ ಸುಖಾಂತ್ಯ ಮತ್ತೊಂದು ದುಃಖಾಂತ್ಯ. ಈ ದುಃಖಾಂತ್ಯ ನಾಟಕಗಳ ಮೂಲ ಗ್ರೀಕ್‌ನ ದುರಂತ ನಾಟಕಗಳು. ಏಕೆಂದರೆ ಇವು ಷೇಕ್ಸ್‌ಪಿಯರ್‌ನ ಇಂದಿನ ನಾಟಕಗಳಿಗಿಂತ ಭಿನ್ನವಾದವುಗಳಾಗಿವೆ. ನಾಟಕದ ಅಂತ್ಯದಲ್ಲಾಗುವ ಪರಿಣಾಮದ ಮೇಲೆ ನಾಟಕಗಳನ್ನು ದುಃಖಾಂತ್ಯ ಮತ್ತು ಸುಖಾಂತ್ಯಗಳೆಂದು ಹೇಳಲಾಗುತ್ತದೆ.

**ದುರಂತನಾಟಕಗಳು**

ದುರಂತನಾಟಕ ಅಥವಾ ರುದ್ರನಾಟಕ ಗ್ರೀಕ್‌ನ ಅಥೆನ್ಸ್‌ನಲ್ಲಿ ಸರ್ವೋಚ್ಚ ಉನ್ನತಿಯನ್ನು ಕಂಡು, ರೋಮಿನಲ್ಲಿ ವೈಭವಕ್ಕೇರಿ, ಇಂಗ್ಲೆಂಡಿಗೆ ಬಂದಿತು. ಗ್ರೀಕ್‌ನಲ್ಲಿ ಕ್ರಿ.ಪೂ. ೫ನೇ ಶತಮಾನ ಒಂದು ಸುವರ್ಣಯುಗ, ರುದ್ರನಾಟಕವನ್ನು ಶಿಖರಕ್ಕೇರಿಸಿದವರು ಈಸ್ಕಿಲಸ್, ಸೊಪೋಕ್ಲಿಸ್ ಮತ್ತು ಯೂರಿಪಡೀಸ್, ಡಯೋನಿಸಸ್ ದೇವತೆಯ ಆರಾಧನಾ ಕಾಲದ ಮೇಳಗೀತೆಗಳು ರುದ್ರನಾಟಕಗಳಾಗಿ ಪರಿಣಮಿಸಿದವು. ಸಂಗೀತ ಮತ್ತು ಸಂಭಾಷಣೆ ಬೆಳೆದು ರುದ್ರನಾಟಕದ ಲಕ್ಷಣಗಳಾದವು.

ಅರಿಸ್ಟಾಟಲ್ ರುದ್ರನಾಟಕದ ಬಗ್ಗೆ ಹೇಳುತ್ತಾ, ರುದ್ರನಾಟಕವು ಗಂಭೀರವಾದ ಸ್ವಲ್ಪ ವಿಶಾಲವಾದ, ಸ್ವಲ್ಪ ಪೂರ್ಣವಾದ ಕಾರ್ಯವೊಂದರ ಅನುಕರಣ, ಹೃದ್ಯ ಗುಣದಿಂದ ಸ್ವಲ್ಪ ವಿಶಾಲವಾದ ಶೋಭಿತವಾದ ಭಾಷೆಯಲ್ಲಿದ್ದು, ಕೃತಿಯ ವಿವಿಧ ಭಾಗಗಳಲ್ಲಿ ಅವುಗಳ ಪ್ರತಿಯೊಂದು ಪ್ರಕಾರವೂ ಪ್ರತ್ಯೇಕವಾಗಿ ಪ್ರತಿಯುಕ್ತವಾಗಿರಬೇಕು, ಕರುಣೆ ಮತ್ತು ಭಯಗಳನ್ನು ಪ್ರಚೋದಿಸುವ ಘಟನೆಗಳಿಂದ ಕೂಡಿದ್ದು ಅಂತಹ ಭಾವನೆಗಳ ಶೋಧನೆಯನ್ನು ಮಾಡಬೇಕು. ಅರಿಸ್ಟಾಟಲ್‌ನ ಈ ರುದ್ರನಾಟಕವನ್ನು ಕುರಿತ ಲಕ್ಷಣ ಇಡೀ ರುದ್ರನಾಟಕದ ಸ್ವರೂಪವನ್ನೇ ವಿವರಿಸುತ್ತದೆ.

ಗ್ರೀಕ್‌ನ ರುದ್ರನಾಟಕಗಳಿಗೆ ಮುಖ್ಯ ಆಕರಗಳೆಂದರೆ ಹೋಮರನ 'ಇಲಿಯಡ್' ಮತ್ತು ಒಡಿಸ್ಸಿ' ಮಹಾಕಾವ್ಯಗಳು. ಗ್ರೀಕ್ ರುದ್ರನಾಟಕದ ನಾಯಕ ಎಲ್ಲಾ ವಿಚಾರಗಳಲ್ಲೂ ಸದ್ಗುಣಿ ಆದರೆ ಯಾವುದೋ ಒಂದರಲ್ಲಿನ ಆತನು ದುರ್ಬಲ. ಈ ದುರ್ಬಲತೆಯೇ ಅವನ ಅಂತ್ಯಕ್ಕೆ ಕಾರಣವಾಗುತ್ತದೆ. ಸರ್ವಸದ್ಗುಣಿಯಾದ ಆತ ಗೊತ್ತಿದ್ದೊ ಅಥವಾ ಗೊತ್ತಿಲ್ಲದೆಯೋ ಮಾಡುವ ಒಂದು ತಪ್ಪು ಆತನನ್ನು ದುರಂತದ ಕಡೆಗೆ ಒಯ್ಯುತ್ತದೆ.

ಗ್ರೀಕ್ ರುದ್ರನಾಟಕ ದೈವ ಮತ್ತು ಮನುಷ್ಯ ಸಂದರ್ಭದ ಒಂದು ದೊಡ್ಡ ಆವರಣ, ಅದರೊಳಗಿನ ಮನುಷ್ಯ ಸಂದರ್ಭಗಳು ಮನುಷ್ಯನ ಸಂಪೂರ್ಣವಾದ ಭಾವನೆಗಳನ್ನು ಪ್ರಕಟಿಸುತ್ತವೆ. ಇಲ್ಲಿ ಮನುಷ್ಯ ಮತ್ತು ದೈವದ ಘರ್ಷನೆಯಲ್ಲಿ ಮನುಷ್ಯನಿಗೆ ಸೋಲು ನಿಶ್ಚಿತವಾದರೂ ವೀರಕ್ಕೆ ಉತ್ಸಾಹಕ್ಕೆ ಅಗ್ರಸ್ಥಾನವನ್ನು ಕಾಣಬಹುದಾಗಿದೆ.

ಗ್ರೀಕ್‌ನಲ್ಲಿ ಈ ನಾಟಕ ಪ್ರಕಾರ ಅ ಹೊತ್ತಿನ ಕಾಲಕ್ಕೆ ಅತ್ಯಂತ ಜನಪ್ರಿಯವಾದ ಶ್ರೇಷ್ಠ ಪ್ರಕಾರದ ಜನಸ್ಪಂದನ ಮಾಧ್ಯಮವಾಗಿತ್ತು. ಇದಕ್ಕೆ ರುದ್ರನಾಟಕ, ದುರಂತನಾಟಕ, ಗಂಭೀರ ನಾಟಕ ಮುಂತಾದ ಹೆಸರುಗಳಿದ್ದರೂ, ಗಂಭೀರ ನಾಟಕ ಎಂಬ ಹೆಸರೇ ಹೆಚ್ಚು ಅರ್ಥಪೂರ್ಣವೆನಿಸುತ್ತದೆ. ಈ ನಾಟಕದ ಅಂತ್ಯದಲ್ಲಿ ಸಾವು ಇರಲೇ ಬೇಕೆಂದೇನು ಇಲ್ಲ. ಸಾವು ದೈಹಿಕವಾಗಲ್ಲದಿದ್ದರೂ, ಮನಸಿಕವಾಗಿರಬಹುದು.

ಗ್ರೀಕ್ ನಾಟಕ ಮನುಷ್ಯ ಜೀವನದ ಗಂಭೀರ ಕಾರ್ಯದ ಅನುಕರಣಾಮಾಧ್ಯಮದಿಂದ ಅದು ಕರುಣೆ ಮತ್ತು ಭಯಗಳನ್ನು ಪ್ರಚೋದಿಸುವ ಮೂಲಕ ಮನುಷ್ಯನ ಭಾವನೆಗಳನ್ನು ಶೋಭಿಸುತ್ತಿತ್ತು. ಈ ಲೋಕದಲ್ಲಿ ದುಃಖದ ಪ್ರಮಾಣವೇ ಅಧಿಕವೆನ್ನುವಂತೆ ಈ ನಾಟಕಗಳಿವೆ. ರುದ್ರನಾಟಕ ಕಾರ್ಯವೊಂದರ ಅನುಕರಣೆಯೆ ವಿನಃ ವ್ಯಕ್ತಿಗಳ ಅನುಕರಣೆಯಲ್ಲ. ಗ್ರೀಕರ ರಂಗತಂತ್ರ, ರಂಗಸಜ್ಜಿಕೆ ಆಶ್ಚರ್ಯ ತರುವಂತದ್ದು. ಸಾಂಸ್ಕೃತಿಕ ಉತ್ಸವಗಳಾಗಿ ರುದ್ರನಾಟಕಗಳು ಪ್ರಯೋಗ ಕಾಣುತ್ತಿದ್ದವು.

ಗ್ರೀಕ್‌ನಲ್ಲಿ ಬೆಳೆದು ಬಂದ ಈ ರುದ್ರನಾಟಕದ ಕಲ್ಪನೆ, ನಮ್ಮಲ್ಲಿ ಏಕೆ ಬರಲಿಲ್ಲ? ಎಂಬ ಪ್ರಶ್ನೆ ಏಳುವುದು ಸಹಜ. ನಮ್ಮಲ್ಲಿನ ನಾಟಕಗಳು ಮಂಗಳಾಂತ್ಯವನ್ನು ಕಾಣುತ್ತವೆ. ಅಲ್ಲಿ ದೇವತೆಗಳೇ ಮನುಷ್ಯರಿಗೆ ಶಿಕ್ಷೆ ನೀಡಿದರೆ ನಮ್ಮಲ್ಲಿ ದೇವತೆಗಳು ನಮ್ಮನ್ನು ಉದ್ಧಾರಮಾಡುತ್ತಾರೆಂಬ ನಂಬಿಕೆ ಬಲವಾಗಿದೆ. ಅಲ್ಲಿ ದೇವತೆಗಳು ಮನುಷ್ಯರ ದೌರ್ಬಲ್ಯಗಳಿಗೆ ತಕ್ಕ ಶಿಕ್ಷೆಯನ್ನು ಜೀವಿತದ ಅವಧಿಯಲ್ಲೇ ನೀಡುತ್ತಾರೆಂಬ ಕಲ್ಪನೆ ಇದೆ.

ಹದಿನಾರನೇ ಶತಮಾನದ ಷೇಕ್ಸ್‌ಪಿಯರ್‌ನಲ್ಲಿ ನಾಟಕದ ಕಲ್ಪನೆ ಬದಲಾಯಿತು. ಇವನ ದುರಂತ ನಾಟಕಗಳು ಗ್ರೀಕ್ ಕಲ್ಪನೆಗಿಂತ ಭಿನ್ನವಾದವು. ಷೇಕ್ಸ್‌ಪಿಯರ್ ಮಹಾನ್ ಕಲಾವಿದ. ಸುಮಾರು ಎಂಬತ್ತು ನಾಟಕಗಳ ಕರ್ತೃ. ಇವನ ನಾಟಕ ರಚನೆಯ ಉದ್ದೇಶವು ಬೇರೆಯಾದರೂ ಸಾಹಿತ್ಯಿಕವಾಗಿ ಯಶಸ್ಸುಗಳಿಸಿರುವುದು ಅವನ ಪ್ರತಿಭೆಯ ಕಾರಣದಿಂದಲೇ. ಷೇಕ್ಸ್‌ಪಿಯರ್ ಮನುಷ್ಯನ ದುರಂತಕ್ಕೆ ವಿಧಿಯನ್ನು ಕಾರಣ ಮಾಡುವುದಿಲ್ಲ. ನಾಯಕನ ದೌರ್ಬಲ್ಯವೇ ಅವನ ಯಾತನೆಗೆ, ಸೋಲಿಗೆ ಬಹುಮಟ್ಟಿಗೆ ಕಾರಣ. ಈನೈತಿಕ ಹೊಣೆಯನ್ನು ಷೇಕ್ಸ್‌ಪಿಯರ್ ಮೀರಿ ರುದ್ರನಾಟಕದ ವ್ಯಾಪ್ತಿಯನ್ನು ಅದರ ಕ್ರಿಯೆಯನ್ನು ಮತ್ತಷ್ಟು ವ್ಯಾಪಕಗೊಳಿಸಿದ್ದಾನೆ.

**ವಿನೋದನಾಟಕಗಳು**

ಗ್ರೀಕ್ ಸಮಾಜ ಕ್ರಿ.ಪೂ. ೫ನೇ ಶತಮನದ ತರುವಾಯ ರಾಜಕೀಯವಾಗಿ, ಸಾಮಾಜಿಕವಾಗಿ ಕುಸಿತ ಕಾಣುತ್ತಿದ್ದಾಗ, ಅರಿಸ್ಟೋಫೆನಸ್ ವಿನೋದನಾಟಕಗಳನ್ನು ಬರೆಯತೊಡಗುತ್ತಾನೆ. ಇವುಗಳನ್ನು ನಗೆನಾಟಕಗಳು ಎಂದು ಕರೆಯುತ್ತಾರೆ. ಈ ನಾಟಕಗಳು ವ್ಯಂಗ್ಯವಾಗಿ ಸಮಾಜದ ಘನತೆ ಇಳಿದಿರುವುದನ್ನು ಬಿಂಬಿಸುತ್ತಾ, ಸಮಾಜದ ಮೌಲ್ಯಗಳನ್ನು ಉನ್ನತೀಕರಿಸುವ ಉದ್ದೇಶ ಹೊಂದಿವೆ.

ವಿನೋದ ನಾಟಕಗಳು ನಗೆಯನ್ನು ಪ್ರಚೋದಿಸುವ ಲಘು ಪಾತ್ರಗಳ ಅನುಕರಣೆ, ಸಾಮಾನ್ಯ ವ್ಯಕ್ತಿಗಳಿಗಿಂತ ಕೆಳಮಟ್ಟದವರ ಅನುಕರಣ ಹಾಸ್ಯದ ದೃಷ್ಟಿಯೇ ಪ್ರಧಾನ. ಆದರೆ ಇದು ಸಮಾಜವನ್ನು ವ್ಯಂಗ್ಯವಾಗಿ ನೋಡಿ, ಸಮಾಜದ ಶುದ್ಧೀಕರಣ ಕ್ರಿಯೆಯೂ ಹೌದು.

ಆಧುನಿಕ ಯುಗದಲ್ಲಿ ನಾಟಕ ಪ್ರಕಾರಗಳು ಯಥೇಚ್ಛವಾಗಿ ಲಭಿಸಿವೆ. ಕನ್ನಡಕ್ಕೆ ಸಂಬಂಧಿಸಿದಂತೆ ನಾಟಕದ ಪ್ರಕಾರಗಳನ್ನು ಈ ಕೆಳಕಂಡಂತೆ ನೋಡಬಹುದಾಗಿದೆ.

೧. ಪೌರಾಣಿಕ ನಾಟಕ
೨. ಐತಿಹಾಸಿಕ ನಾಟಕ
೩. ಸಾಮಾಜಿಕ ನಾಟಕ
೪. ಗೀತ ನಾಟಕ
೭. ವಿಡಂಬನೆ
೮. ಅಸಂಗತ ನಾಟಕ
೯. ರೇಡಿಯೋ ನಾಟಕ
೧೦. ಕಂಪನಿ ನಾಟಕ

೫. ಏಕಾಂಕ ನಾಟಕ ೧೧. ಬೀದಿನಾಟಕ

೬. ಪ್ರಹಸನ

ಭಾರತೀಯ ಸಾಹಿತ್ಯದಲ್ಲಿ ಕಾವ್ಯಕ್ಕಿರುವಷ್ಟೇ ಪ್ರಾಚೀನತೆ ನಾಟಕ ಸಾಹಿತ್ಯಕ್ಕೂ ಇದೆ. ಕಾವ್ಯ ಮತ್ತಿತರ ಸಾಹಿತ್ಯ ಪ್ರಕಾರಗಳು ಶ್ರವ್ಯವಾದರೆ ನಾಟಕ ಸಾಹಿತ್ಯ ಮಾತ್ರ ಶ್ರವ್ಯ ಮತ್ತು ದೃರ್ಶಯಗಳೆರಡರ ಸಾಧ್ಯತೆಯನ್ನು ಪಡೆದುಕೊಂಡಿದೆ. ಕಾವ್ಯ ಬೌದ್ಧಿಕವಲಯದ ಮಟ್ಟಕ್ಕೆ ಸೀಮಿತಗೊಂಡರೆ ನಾಟಕ ಜನ ಸಾಮಾನ್ಯರನ್ನೂ ತಲುಪಿತು. ಹೀಗಾಗಿಯೇ ''ಕಾವ್ಯೇಶು ನಾಟಕಂ ರಮ್ಯಂ'' ಎಂಬ ಮಾತು ಚಾಲ್ತಿಗೆ ಬಂದು ಇಂದಿಗೂ ದೃಶ್ಯ ಮಾಧ್ಯಮದ ಮೂಲಕ ಪ್ರಸಾರಗೊಳ್ಳುವ ಎಲ್ಲಾ ಸಾಹಿತ್ಯವೂ ಜನಮನವನ್ನು ತಲುಪುತ್ತಿವೆ.

ನಾಟಕದ ಕೇಂದ್ರ ವಿಷಯ ಅಭಿನಯ. ಹಳೆಯ ಶಿಲಾಯುಗದಿಂದ ಹಿಡಿದು ಇವತ್ತಿನ ನಾಗರಿಕತೆಯವರೆಗೆ ಮನುಷ್ಯ ಪ್ರಕೃತಿಯಲುಂಟಾಗುವ ಏರು-ಪೇರುಗಳನ್ನು ತನ್ನ ಚಿತ್ತ ವ್ಯಾಪಾರಗಳನ್ನು ತನ್ನ ಧ್ವನಿ ಮತ್ತು ಅಂಗಾಂಗಳ ಮೂಲಕ ಬಹಿರಂಗಗೊಳಿಸುತ್ತಾ ಬಂದಿದ್ದಾನೆ. ಚಿತ್ತ ವ್ಯಾಪಾರಗಳ ವ್ಯವಸ್ಥಿತವಾದ ಶಬ್ದರೂಪದ ಅನುಕರಣವೇ 'ನಾಟಕಸಾಹಿತ್ಯ' ಎಂದು ಕರೆಯಬಹುದು.

ಈ ಎಲ್ಲಾ ಹಿನ್ನೆಲೆಯಲ್ಲಿ ಭಾರತೀಯ ರಂಗಭೂಮಿ ನಿಧಾನವಾಗಿ ಬೆಳೆದುಕೊಂಡು ಬಂದಿದೆ. ಸಾಹಿತ್ಯ, ಸಂಗೀತ, ಅಭಿನಯ ಇವು ಮುರು ರಂಗಭೂಮಿಯಲ್ಲಿ ವ್ಯವಸ್ಥಿತವಾಗಿ ಮೇಳೈಸಿಕೊಂಡು ರಂಗ ಮಾಧ್ಯಮವೆಂದು ಕರೆಸಿಕೊಂಡು ಭಾರತದ ಉದ್ದಗಲಕ್ಕೂ ವ್ಯಾಪಿಸಿಕೊಂಡಿವೆ. ಭಾರತೀಯ ರಂಗಭೂಮಿಯಿಂದ ಪ್ರಭಾವಿತವಾದ ದೇಶೀಯ ರಂಗಭೂಮಿಗಳು ಬೆಳೆದು ಉಜ್ವಲಗೊಂಡು ಇಂದು ದೇಶೀಯ ರಂಗಭೂಮಿಗಳು ತುಂಬ ಪ್ರಭಾವಯುತವಾಗಿವೆ. ಅಂತೆಯೇ ಕರ್ನಾಟಕದ ರಂಗಭೂಮಿಯು ತನ್ನದೇ ಇತಿಹಾಸವನ್ನು ಹೊಂದಿದೆ.

ಕರ್ನಾಟಕದ ರಂಗಭೂಮಿಯ ಜೊತೆ ಜೊತೆಯಲ್ಲಿಯೇ ಮಂಡ್ಯದ ರಂಗಭೂಮಿಯ ಇತಿಹಾಸವೂ ಬಿಚ್ಚಿಕೊಳ್ಳುತ್ತದೆ. ಕನ್ನಡ ನಾಟಕ ಸಾಹಿತ್ಯಕ್ಕೆ ಅಂಕುರಾರ್ಪಣೆಯನ್ನು ಮಾಡಿದ 'ಮಿತ್ರವಿಂದಗೋವಿಂದ' ನಾಟಕದ ಕರ್ತೃವಾದ ಸಿಂಗರಾರ್ಯ, ಚಿಕ್ಕದೇವರಾಜ ಒಡೆಯರ್ ಕಾಲದಲ್ಲಿದ್ದ ಪ್ರಸಿದ್ಧ ಕವಿ. ಆ ಹೊತ್ತಿಗೆ ಇಂದಿನ ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ, ಮೈಸೂರು ಒಡೆಯರ ರಾಜಧಾನಿಯಾಗಿದ್ದುದು ಗಮನಾರ್ಹವಾದ ಸಂಗತಿ. ಮೈಸೂರಿನ ರಾಜ ಒಡೆಯರುಗಳು ಕೇವಲ ಆಡಳಿತಕ್ಕೆ ಮಾತ್ರ ಸೀಮಿತವಾಗದೆ, ಕಲೆ, ಸಾಹಿತ್ಯ, ಸಂಸ್ಕೃತಿಯ ದೊಡ್ಡ ಪೋಷಕರಾಗಿದ್ದುದು ತುಂಬ ಮಹತ್ವದ ವಿಷಯವೇ. ಯಾವಾಗ ಈ ಕಲೆಗಳಿಗೆ ರಾಜಾಶ್ರಯ ದೊರಕಿತೋ ಆ ಕ್ಷೇತ್ರಗಳಲ್ಲಿ ಜನಸಾಮಾನ್ಯರು ಆಸಕ್ತಿ ತಳೆಯಲು ಕಾರಣವಾಯಿತು. ಒಡೆಯರ ಆಳ್ವಿಕೆಗೆ ಒಳಗಾದ ಎಲ್ಲಾ ಪ್ರದೇಶಗಳು ಕಲೆಗಳಿಗೆ

ಆಶ್ರಯದ ತಾಣಗಳಾಗಿ ರೂಪಗೊಂಡಿದ್ದು ಈ ಭಾಗದ ಸೌಭಾಗ್ಯವೆಂದೇ ಭಾವಿಸಬೇಕು. ಕಲಾ ಪ್ರಕಾರಗಳಲ್ಲಿ ರಂಗಭೂಮಿ ಜನಸಾಮಾನ್ಯರನ್ನು ಸುಲಭವಾಗಿ ತಲುಪಿತು. ಸಂಗೀತ ಮತ್ತು ನೃತ್ಯ ಅಪಾರವಾದ ಸಾಧನೆಯನ್ನು ಬಯಸುತ್ತದೆ. ರಂಗಭೂಮಿ ಅಲ್ಪಸ್ವಲ್ಪ ಸಾಧನೆ ಇದ್ದರೂ ಜನಸಾಮಾನ್ಯರಿಗೆ ದಕ್ಕುತ್ತದೆ. ಹೀಗಾಗಿ ಉಳಿದ ಪ್ರಕಾರಗಳಿಗಿಂತ ರಂಗಭೂಮಿ ಜನಸಾಮಾನ್ಯರ ಅಭಿವ್ಯಕ್ತಿಯ ಮಾಧ್ಯಮವಾಗಿ ಇಂದಿಗೂ ಕಂಗೊಳಿಸುತ್ತಿದೆ.

ಒಂದು ಕಾಲಕ್ಕೆ ಮೈಸೂರು ಒಡೆಯರ ಅಧೀನಕ್ಕೊಳಪಟ್ಟಿದ್ದ ಈಗಿನ ಮಂಡ್ಯ ಜಿಲ್ಲೆಯು ರಂಗಭೂಮಿಯನ್ನು ಮನರಂಜನೆಗಾಗಿ ಬಳಸಿಕೊಂಡಿದ್ದು ಆಶ್ಚರ್ಯವೇನಲ್ಲ. ಮೇಲ್ನೋಟಕ್ಕೆ ಮನೋರಂಜನೆಯ ಮಾಧ್ಯಮವಾಗಿ ರಂಗಭೂಮಿ ಕಾಣಿಸಿಕೊಂಡರೂ ನಮ್ಮ ಜನರಿಗೆ ನೀತಿಪಾಠವನ್ನು ಹೇಳಲು ಪುರಾಣ, ಕಾವ್ಯ, ಇತಿಹಾಸಗಳ ವಸ್ತುಗಳನ್ನು ನಾಟಕದ ವಸ್ತುಗಳಾಗಿ ಪರಿವರ್ತಿಸಿಕೊಂಡು ರಂಗಭೂಮಿಯನ್ನು ಜೀವಂತವಾಗಿಡಲು ಪ್ರಯತ್ನಿಸಿದ್ದಾರೆ.

ಮಂಡ್ಯ ಜಿಲ್ಲೆಯ ರಂಗಭೂಮಿಯ ಇತಿಹಾಸವನ್ನು ಕೆದಕಿ ನೋಡಿದಾಗ ಜನಪದರು ಮೊದಲಿಗೆ ಹಳ್ಳಿಗಳಲ್ಲಿ ಬಯಲಾಟಗಳನ್ನು ಪ್ರದರ್ಶಿಸುತ್ತಿದ್ದುದು ಕಂಡುಬರುತ್ತದೆ. ಮುಂದೆ ಈ ಬಯಲಾಟವನ್ನೇ ಜನಪದ ರಂಗಭೂಮಿ ಎಂದೇ ಕರೆಯಲಾಗಿದೆ. ಸೂತ್ರದ ಗೊಂಬೆ ಮತ್ತು ತೊಗಲುಗೊಂಬೆಗಳನ್ನು ಉಪಯೋಗಿಸಿ ರಂಗಭೂಮಿಯ ಸಾಧ್ಯತೆಗಳನ್ನು ಕಂಡುಕೊಂಡಿದ್ದಾರೆ. ಗೊಂಬೆಯಾಟಗಳ ಮೂಲಕ ರಂಗಭೂಮಿಗೆ ತಮ್ಮನ್ನು ಅರ್ಪಿಸಿಕೊಂಡು ಅದನ್ನೇ ವೃತ್ತಿಯಾಗಿಸಿಕೊಂಡ ತಂಡಗಳು ಈಗಲೂ ಜಿಲ್ಲೆಯಲ್ಲಿ ಕಾಣಬರುತ್ತದೆ.

ಮುಂದೆ ನಮ್ಮ ರಂಗಭೂಮಿಯ ಮೇಲೆ ಪಾರ್ಸಿ ರಂಗಭೂಮಿಯ ಪ್ರಭಾವಗಳು ಹೆಚ್ಚಾಗಿ ಆಗಿ ಜನಪದ ರಂಗಭೂಮಿಗೆ ಭಿನ್ನವಾದ ರಂಗಭೂಮಿಯ ಸಾಧ್ಯತೆಗಳನ್ನು ನಮ್ಮ ಜನ ಕಂಡುಕೊಂಡರು. ಇಂದು ರಂಗಭೂಮಿಯ ವೈವಿಧ್ಯತೆಗಳನ್ನು ಗುರುತಿಸುವ ಸಲುವಾಗಿ ನಾವು ಜನಪದರಂಗಭೂಮಿ, ವೃತ್ತಿ ರಂಗಭೂಮಿ, ಹವ್ಯಾಸಿ ರಮಗಭೂಮಿ, ಗ್ರಾಮೀಣರಂಗಭೂಮಿ ಎಂದೆಲ್ಲಾ ವಿಂಗಡಿಸಿಕೊಂಡಿದ್ದೇವೆ. ಮೇಲುನೋಟಕ್ಕೆ ಇವುಗಳು ಬೇರೆಯಾಗಿ ಕಂಡರೂ ಒಟ್ಟಾರೆಯಾಗಿ ಆಶಯಗಳೆಲ್ಲಾ ಒಂದೇ.

ಅಭಿನಯವನ್ನು ವೃತ್ತಿಯಾಗಿಸಿಕೊಂಡು ರಂಗಭೂಮಿಯಲ್ಲಿ ತೊಡಗಿಕೊಂಡವರ ತಂಡವನ್ನು ವೃತ್ತಿತಂಡಗಳೆಂದು ಕರೆಯಲಾಗಿದೆ. ಮಂಡ್ಯ ಜಿಲ್ಲೆಯಲ್ಲಿ ವೃತ್ತಿತಂಡವನ್ನು ಕಟ್ಟಿ ಬೆಳೆಸಿದ ಉದಾಹರಣೆಗಳು ಕಡಿಮೆ. ಆದರೆ ರಾಜ್ಯ ಹಾಗೂ ರಾಷ್ಟ್ರಮಟ್ಟದಲ್ಲಿ ಹೆಸರು ಮಾಡಿದ ವೃತ್ತಿ ಕಂಪನಿಗಳಲ್ಲಿ ನಟಿಸಿ ಹೆಸರು ಮಾಡಿದ ಕೆಲವು ಮಂದಿಯನ್ನು ಗುರುತಿಸಬಹುದು. ಈ ದಿಶೆಯಲ್ಲಿ ಮಳವಳ್ಳಿಯ ಸುಂದರಮ್ಮ, ಪಾಂಡವಪುರದ

ಎಚ್.ಕೆ.ಯೋಗಾನರಸಿಂಹ, ಆಂಜನೇಯ ಪಾತ್ರದ ಕೊಳ್ಳೆವೆಂಕಟಾಚಾಲಯ್ಯ, ನಾಗಮಂಗಲದ ಕಿಟ್ಟಿ, ಮಂಡ್ಯದ ಪುಟ್ಟಮ್ಮ ಮುಂತಾದವರು ಪ್ರಸಿದ್ಧರಾಗಿದ್ದಾರೆ. ವೃತ್ತಿ ಕಂಪನಿಗಳು ನಮ್ಮಲ್ಲಿಲ್ಲವಾದರೂ ವೃತ್ತಿನಾಟಕ ಕಂಪನಿಗಳನ್ನು ಮಂಡ್ಯದ ಜನ ಇನ್ನೂ ಪ್ರೋತ್ಸಾಹಿಸುತ್ತಲೇ ಇದ್ದಾರೆ. ವೃತ್ತಿ ನಾಟಕ ಕಂಪನಿಗೆ ಪ್ರೋತ್ಸಾಹ ಕೊಡುವ ಉದ್ದೇಶದಿಂದ ಸ್ವಾತಂತ್ರ್ಯ ಪೂರ್ವದಲ್ಲಿಯೇ ಶ್ರೀರಂಗಪಟ್ಟಣದ ಕೊಡಿಯಾಲಯದಲ್ಲಿ ಕೊಡಿಯಾಲದ ಸಾಹುಕಾರರು ರಂಗಮಂದಿರವನ್ನು ನಿರ್ಮಾಣ ಮಾಡಿದ್ದು ನಿಜಕ್ಕೂ ಅದ್ಭುತಸಂಗತಿಯೇ, ಅಲ್ಲಿಂದ ಮುಂದೆ ಮಂಡ್ಯದಲ್ಲಿ ಲಕ್ಷ್ಮೀಜನಾರ್ಧನ ರಂಗಮಂದಿರ ಒಂದು ರೂಪ ತಳೆದು ಪ್ರಸಿದ್ಧ ಗುಬ್ಬಿಕಂಪನಿ, ಸುಬ್ಬಯ್ಯನಾಯಿಡು ಕಂಪನಿ, ಈರಣ್ಣಯ್ಯ ಮಿತ್ರಮಂಡಳಿ ಮುಂತಾದ ತಂಡಗಳು ತಮ್ಮ ಅಮೋಘವಾದ ಪ್ರದರ್ಶನವನ್ನು ನೀಡಿ ಜನರಲ್ಲಿ ರಂಗಾಭಿರುಚಿಯನ್ನು ಮೂಡಿಸಿದುದು ಇತಿಹಾಸ ಸತ್ಯ.

ಜನಪದ ರಂಗಭೂಮಿಯಲ್ಲಿನ ಆಸಕ್ತಿ ಮತ್ತು ವೃತ್ತಿರಂಗಭೂಮಿಯ ಪ್ರಭಾವ ಇಡೀ ಮಂಡ್ಯ ಜಿಲ್ಲೆಯ ಗ್ರಾಮೀಣಭಾಗದ ಜನರ ಮೇಲೆ ಗಾಢವಾಗಿ ಬೀರಿದ ಪರಿಣಾಮ ಅನನ್ಯವಾದದ್ದು. ಒಂದು ಕಾಲಕ್ಕೆ ಬೇಸಿಗೆ ಬಂತೆಂದರೆ ಇಡೀ ಜಿಲ್ಲೆಯ ಗ್ರಾಮಗಳು ರಂಗಭೂಮಿಯಾಗಿ ಪರಿವರ್ತಿತಗೊಂಡು ಸಾಮೂಹಿಕ ಪ್ರಕ್ರಿಯೆಯಲ್ಲಿ ಇಡೀಹಳ್ಳಿಗಳು ತೊಡಗಿಕೊಳ್ಳುತ್ತಿದ್ದುದ್ದು. ನಿಜಕ್ಕೂ ಆಶ್ಚರ್ಯವನ್ನುಂಟು ಮಾಡುತ್ತದೆ. ತಮ್ಮದೇ ಹಣ, ತಮ್ಮದೇ ಅಭಿನಯ, ತಮ್ಮದೇ ವೇದಿಕೆಗಳ ಮೂಲಕ ನಾಟಕಗಳನ್ನಾಡಿ ರಾಮ–ರಾವಣ, ಭೀಮ–ದುರ್ಯೋಧನರ ಗುಂಗಿನಲ್ಲಿ ಮೆರೆದಾಡುತ್ತಾ ಕೆಲವು ದಿನಗಳ ಕಾಲ ಆ ಗುಂಗಿನಲ್ಲಿಯೇ ಇರುತ್ತಿದ್ದ ಆ ಜನರ ಪರಿಯನ್ನು ನೋಡಿದಾಗ ರಂಗಭೂಮಿಯ ಬಗ್ಗೆ ಈ ಜಿಲ್ಲೆಯ ಜನಕ್ಕೆ ಎಷ್ಟೊಂದು ಅಗಾಧವಾದ ಪ್ರೀತಿ ಇದ್ದಿತ್ತೆಂದು ಗೋಚರವಾಗುತ್ತದೆ. ಈ ತೆರನಾದ ರಂಗಸಜ್ಜಿಕೆಯನ್ನು ವೃತ್ತರಂಗ ಭೂಮಿಯಾಗಲೀ, ಹವ್ಯಾಸಿ ರಂಗಭೂಮಿಗಾಗಲಿ ಸೇರಿಸಲಾಗದ್ದರಿಂದ ಇದನ್ನು ಗ್ರಾಮೀಣ ರಂಗಭೂಮಿ ನಿರಂತರತೆಯಾಗಲೀ, ಹವ್ಯಾಸಿ ರಂಗಭೂಮಿಯ ನಿಯಮಿತವಾದ ಬದ್ಧತೆಯಾಗಲಿ, ಕಾಲ ನಿರ್ದಿಷ್ಟವಾಗಲಿ ಇಲ್ಲ. ಬೇಸಿಗೆಯಲ್ಲಿ ಕೃಷಿ ಕಾರ್ಯ ಸ್ಥಗಿತಗೊಳ್ಳುವ ಕಾರಣ ತಮ್ಮ ಬಿಡುವಿನ ವೇಳೆಯನ್ನು ಈ ರೀತಿಯಲ್ಲಿ ಉಪಯೋಗಿಸಿಕೊಳ್ಳುವ ಜಾಣ್ಮೆಯನ್ನು ನಮ್ಮ ಗ್ರಾಮೀಣ ಜನರಲ್ಲಿ ಕಾಣಬಹುದು. ಕತ್ತಲಾಗುತ್ತಿದ್ದಂತೆಯೇ ಊರ ಮುಂದಿನ ರಂಗ ಚಾವಡಿಗಳು ತುಂಬಿ ತುಳುಕುತ್ತವೆ. ನೆಂಟರು ಇಷ್ಟರೆಲ್ಲಾ ಬಂದು ಕೂರುತ್ತಾರೆ. ಮನೆ ಮನೆಗಳಲ್ಲಿ ವಿಶೇಷವಾದ ಅಡುಗೆಯಾಗುತ್ತದೆ. ಅವರಿಗೆಲ್ಲಾ ಉಣಬಡಿಸಿ ರಾತ್ರಿ ಹತ್ತು ಗಂಟೆಗೆಲ್ಲಾ ಮನೆಗಳಿಗೆ ಬೀಗ ಹಾಕಿ ಮನೆ ಮಂದಿಯೆಲ್ಲಾ ಬಂದು ಊರ ಮುಂದೆ ನೆರೆಯುತ್ತಾರೆ. ರಾತ್ರಿ ಹತ್ತು ಗಂಟೆಗೆ ಸೂತ್ರದಾರನಿಂದ ಪ್ರಾರಂಭವಾದ ನಾಟಕ ಬೆಳಕರಿಯುವ ತನಕ ಸಾಗುತ್ತದೆ.

ಇವರು ಆರಿಸಿಕೊಳ್ಳುವ ನಾಟಕಗಳು ರಾಮಾಯಣ, ಮಹಾಭಾರತ ಕಾವ್ಯ ಮೂಲಗಳ, ಪೌರಾಣಿಕ ಪ್ರಸಂಗಗಳ ಐತಿಹಾಸಿಕ ನೆಲೆಗಳಿಂದ ಆರಿಸಿಕೊಂಡ ವಸ್ತುಗಳಾಗಿರುತ್ತವೆ. ಸಾಮಾಜಿಕ ನಾಟಕಗಳೆಂದರೆ ಬಹುತೇಕವಾಗಿ ಈ ಜನ ಮೂಗು ಮುರಿಯುತ್ತಾರೆ. ರಂಗಗೀತೆಗಳಿಲ್ಲದ ನಾಟಕ ಇವರ ದೃಷ್ಟಿಯಲ್ಲಿ ನಾಟಕವೇ ಅಲ್ಲ. ಒಂದು ನಾಟಕಕ್ಕೆ ಅಣಿಗೊಳ್ಳಲು ಮೂರರಿಂದ ನಾಲ್ಕು ತಿಂಳುಗಳಾದರೂ ತಾಲೀಮಿನಲ್ಲಿ ನಿರತರಾಗುತ್ತಾರೆ. ಓರ್ವ ನಟನೂ ರಂಗಗೀತೆಯನ್ನಭ್ಯಸಿಸಿ ರಂಗದ ಮೇಲೆ ಹಾಡುತ್ತಾ ಧನ್ಯತೆಯನ್ನು ಕಂಡುಕೊಳ್ಳುತ್ತಾನೆ. ಇವರ ತಾಲೀಮಿಗೆ ನಿರ್ದೇಶಕರೊಬ್ಬ ಖಂಡಿತ ಇರುತ್ತಾನೆ. ಇವರು ಹಾರ್ಮೋನಿಯಂ ವಾದಕರೂ ಆಗಿ ಸಂಭಾಷಣೆ, ಅಭಿನಯ ಮತ್ತು ಸಂಗೀತಗಾರರಾಗಿಯೂ ಕೆಲಸ ನಿರ್ವಹಿಸುತ್ತಾರೆ. ಇಂತಹ ವರ್ಗದ ನಿರ್ದೇಶಕರನ್ನು ನಾಟಕದ ಮೇಷ್ಟ್ರು ಎಂದೇ ಕರೆಯಲಾಗುತ್ತದೆ. ಇದೊಂದು ಪಾರಿಭಾಷಿಕ ಶಬ್ದವಾಗಿ ನಾಟಕದ ಮೇಷ್ಟ್ರು ಎಂದ ಕೂಡಲೇ ಗ್ರಾಮೀಣ ರಂಗಭೂಮಿಯ ಪ್ರಮುಖ ನಿರ್ವಾಹಕನಾಗಿ ತಟ್ಟನೆ ಆ ಕಲ್ಪನೆಯನ್ನು ಮನದಲ್ಲಿ ಮೂಡಿಸಿಕೊಳ್ಳಲಾಗುತ್ತದೆ. ಇಂತಹ ನಾಟಕದ ಮೇಷ್ಟ್ರುಗಳು ಜಿಲ್ಲೆಯ ಎಲ್ಲೆಡೆಗಳಲ್ಲಿಯೂ ಕಂಡುಬರುತ್ತಾರೆ. ಬಹುತೇಕ ಮಂದಿ ವೃತ್ತಿ ನಿರತರಾಗಿಯೂ ಇರುತ್ತಾರೆ. ಗ್ರಾಮೀಣ ಭಾಗಗಳಲ್ಲಿ ಇವರಿಗೆ ವಿಶೇಷವಾದ ಗೌರವ, ತಾಲೀಮಿನ ಉದ್ದಕ್ಕೂ ಇವರಿಗೆ ಊಟ, ವಸತಿ ಹಾಗೂ ಒಂದು ನಿರ್ದಿಷ್ಟವಾದ ಮೊತ್ತವನ್ನು ಸಂಭಾವನೆಯಾಗಿ ನೀಡುತ್ತಾರೆ. ಬಹುತೇಕ ಈ ರಂಗಭೂಮಿ ಪಾರ್ಸಿರಂಗಭೂಮಿಯ ಪ್ರಭಾವದಿಂದ ಪ್ರೋಸೀಸಿಯಂ ಥಿಯೇಟರ್‌ನ ಪ್ರಭಾವದಿಂದ ಕೂಡಿದ್ದಾದ್ದರಿಂದ ಪರದೆಗಳು ಪೌರಾಣಿಕ ಪ್ರಸಂಗಗಳಿಗೆ ಅನುಗುಣವಾದ ವೇಷ-ಭೂಷಣಗಳು ವಿವಿಧ ಮಾದರಿಯ ಆಯುಧಗಳು ವಿದ್ಯುತ್‌ದೀಪಗಳು ಈ ರಂಗಭೂಮಿಯುಲ್ಲಿ ಪ್ರಮುಖ ಪಾತ್ರವನ್ನು ವಹಿಸಿವೆ. ಈ ಅವಶ್ಯಕತೆಯನ್ನು ಪೂರೈಸುವುದಕ್ಕಾಗಿಯೇ ಅನೇಕ ಸಂಸ್ಥೆಗಳು ಹುಟ್ಟಿಕೊಂಡು ಎಲ್ಲಾ ಪರಿಕರಗಳನ್ನು ಒಟ್ಟುಗೂಡಿಸಿ ಗ್ರಾಮೀಣರಂಗಭೂಮಿಯ ಅವಶ್ಯಕತೆಗಳನ್ನು ಪೂರೈಸುವುದಕ್ಕೆ ವೃತ್ತಿಪರವಾಗಿ ನಿಂತವು. ಇದೇ ಜಿಲ್ಲೆಯಲ್ಲಿ ರಂಗಚಟುವಟಿಕೆ ತೀವ್ರವಾಗಿದ್ದುದರಿಂದ ಅನೇಕ ಮಾಲೀಕರು ಬಹಳಷ್ಟು ಬಂಡವಾಳವನ್ನು ಹೂಡಿ ಬಾಡಿಗೆಗೆ ನೀಡಲು ಸಿದ್ಧರಾದರು. ಇಂತಹ ವ್ಯವಸ್ಥೆಗೆ ಸೀನರಿಗಳೆಂದು, ಅವುಗಳ ಮಾಲೀಕರಿಗೆ ಸೀನರಿ ಮಾಲೀಕರೆಂದು ನಾಮಕರಣವಾಯಿತು. ಇಂತಹ ಸೀನರಿ ಮಾಲಿಕರಲ್ಲಿ ಕೊಡಿಯಾಲದ ಸಾಹುಕಾರರ ಸೀನರಿ, ಬೆಣ್ಣೆಕಾಳಯ್ಯನವರ ಸೀನರಿ, ಅವರ ತಮ್ಮ ಜವರಪ್ಪನವರ ಸೀನರಿ, ಅವರ ಕುಟುಂಬಕ್ಕೆ ಸೇರಿದ ಸಾಂಬಯ್ಯನವರ ಸೀನರಿ, ಬಂಗಾರಿ ನರಸಿಂಹಯ್ಯನವರ ಸೀನರಿ, ಇಂದಿರಾ ಡ್ರಾಮಸೀನರಿ, ಹಳ್ಳಿಕೇಶ್ವರ ಡ್ರಾಮಸೀನರಿ, ಮರ್ಕೆಟ್‌ನ ನಾರಾಯಣಪ್ಪನವರ ಸೀನರಿ ಬಹುಮುಖ್ಯವಾದವು. ಈ ಸೀನರಿಗಳು ಕರ್ನಾಟಕದಲ್ಲಿ ಎಷ್ಟು

ಪ್ರಖ್ಯಾತವಾದವೆಂದರೆ ''ಸೀನರಿಗಳೆಂದರೆ ಮಂಡ್ಯದ ಸೀನರಿಗಳು'' ಎನ್ನುವಷ್ಟರ ಮಟ್ಟಿಗೆ ಪ್ರಸಿದ್ಧಿಯನ್ನು ಪಡೆದುಕೊಂಡಿವೆ. ನೆರೆಯ ಆಂಧ್ರ ಮತ್ತು ತಮಿಳುನಾಡುಗಳಿಗೂ ಈ ಸೀನರಿಗಳು ಹೋಗುತ್ತಿದ್ದವು ಎಂದರೆ ಇವುಗಳ ಪ್ರಾಮುಖ್ಯತೆ ಅರ್ಥವಾದೀತು. ''ಕುರುಕ್ಷೇತ್ರ'', ಸಂಪೂರ್ಣರಾಮಾಯಣ, ಪಾಂಡವವಿಜಯ, ತ್ರಿಜನ್ಮಮೋಕ್ಷ, ಶಿವಜಲಂಧರ ಮುಂತಾದ ನಾಟಕಗಳು ಪ್ರತಿಯೊಂದು ಹಳ್ಳಿಯಲ್ಲಿಯೂ ಅಭಿನಯಿಸಲ್ಪಡುತ್ತಿದ್ದವು. ಈ ಎಲ್ಲಾ ನಾಟಕಗಳಲ್ಲಿ ಅಭಿನಯಿಸುವ ಪಾತ್ರಧಾರಿಗಳಲ್ಲಿ ಒಬ್ಬಿಬ್ಬರಾದರೂ ತಮ್ಮ ಅಭಿನಯ ಮತ್ತು ಹಾಡುಗಾರಿಕೆಗೆ ಪ್ರಸಿದ್ಧರಾಗಿದ್ದರು. ಹೀಗಾಗಿ ನೂರಾರು ಸಮರ್ಥ ನಟರನ್ನು ಗರ್ಭೀಕರಿಸಿಕೊಂಡ ಮಂಡ್ಯ ಜಿಲ್ಲೆಯ ಗ್ರಾಮೀಣರಂಗಭೂಮಿ ಇತ್ತೀಚಿನವರೆಗೆ ಶ್ರೀಮಂತವಾಗೇ ಇತ್ತು. ಆದರೆ ಟಿ.ವಿ. ಮಾಧ್ಯಮಗಳು ದುಬಾರಿ ವೆಚ್ಚ, ಮೇಷ್ಟ್ರುಗಳ ಏರಿದ ಸಂಭಾವನೆ, ಸೀನರಿಗಳಿಗೆ ದುಬಾರಿ ಬಾಡಿಗೆ ಜೊತೆಗೆ ದೈನಂದಿನ ಕೋಟಲೆಗಳನ್ನು ಎದುರಿಸಲಾಗದೆ, ಸಧ್ಯಕ್ಕೆ ಮಂಡ್ಯ ಜಿಲ್ಲೆಯ ಗ್ರಾಮೀಣರಂಗಭೂಮಿ ತತ್ತರಿಸುತ್ತಿದೆ. ಆದರೂ ಇಲ್ಲಿಯ ಜನ ರಂಗಭೂಮಿಯ ಹುಚ್ಚಿನಿಂದ ದೂರವಾಗಿಲ್ಲ. ಆಧುನಿಕತೆಯ ವೇಷತೊಟ್ಟಿರುವ ವಿದ್ಯಾವಂತರು ರಂಗಸಂಗೀತ ಕಿವಿಗೆ ಬಿದ್ದ ಕೂಡಲೇ ಅದರ ಮಟ್ಟುಗಳ ಬಗ್ಗೆ ಆಕರ್ಷಿತರಾಗುವುದನ್ನು ಇಂದೂ ನಾವು ಕಾಣಬಹುದು.

ಹವ್ಯಾಸಿರಂಗಭೂಮಿ, ಕರ್ನಾಟಕದಲ್ಲಿ ನೆಲೆಯೂರಿದ್ದು, ಸ್ವಾತಂತ್ರ್ಯ ಪೂರ್ವದ ಕೆಲವು ವರ್ಷಗಳ ಹಿಂದೆಯಷ್ಟೇ ಎಂಬುದನ್ನು ಮನಗಂಡಾಗ ಹವ್ಯಾಸಿ ರಂಗಭೂಮಿಯ ಇತಿಹಾಸ ದೊಡ್ಡದೇನೂ ಅಲ್ಲ. ಕೈಲಾಸಂ ಅವರ ಪ್ರಯತ್ನದಿಂದಾಗಿ ಮೊಳಕೆ ಹೊಡೆದ ಹವ್ಯಾಸಿ ರಂಗಭೂಮಿ ಶ್ರೀರಂಗ ಮುಂತಾದವರ ಮೂಲಕ ಪಲ್ಲವಿಸಿ ಬಿ.ವಿ.ಕಾರಂತ್, ಪ್ರೊ.ಬಿ.ಚಂದ್ರಶೇಖರ್, ಗಿರೀಶ್‌ಕಾರ್ನಾಡ್, ಚಂದ್ರಶೇಖರ ಕಂಬಾರ ಮುಂತಾದವರ ಮೂಲಕ ಇತಿಹಾಸವನ್ನು ಸೃಷ್ಟಿಸಿರುವುದು ನಮಗೆಲ್ಲಾ ತಿಳಿದ ವಿಷಯವೇ. ರಾಜಧಾನಿ ಬೆಂಗಳೂರಿನಲ್ಲಾದ ಪ್ರಯತ್ನಗಳು ನಿಧಾನವಾಗಿ ಕರ್ನಾಟಕದ ಇತರ ಭಾಗಗಳಿಗೂ ಹರಡಿ, ಮಂಡ್ಯ ಜಿಲ್ಲೆಯ ಹವ್ಯಾಸಿರಂಗಭೂಮಿಗೆ ಪಾದಾರ್ಪಣೆ ಮಾಡಿತು. ಕೋಲಾರದಿಂದ ಬಂದು ಮಂಡ್ಯದಲ್ಲಿ ನೆಲೆಸಿದ ಪೌರಾವಾಣಿಯ ಕೆ.ಗುಂಡಣ್ಣ ಅವರನ್ನು ನಾವು ಮರೆಯುವ ಆಗಿಲ್ಲ. ಅನೇಕ ಸಾಮಾಜಿಕ ನಾಟಕಗಳನ್ನು ರಚಿಸಿ ಮಂಡ್ಯದ ಹವ್ಯಾಸಿ ರಂಗಭೂಮಿಗೆ ಅಂಕುರಾರ್ಪಣೆ ಮಾಡಿದರು. ಇವರ ನಾಟಕಗಳು ಕೇವಲ ಮಂಡ್ಯಕ್ಕೆ ಸೀಮಿತಗೊಳ್ಳದೇ ಕರ್ನಾಟಕದಾದ್ಯಂತ ಹರಡಿ ಶಾಲಾ ಕಾಲೇಜುಗಳ ವಾರ್ಷಿಕ ಸಮಾರಂಭಗಳಲ್ಲಿ ಅಭಿನಯಿಸಲ್ಪಟ್ಟು, ದೊಡ್ಡ ಹೆಸರನ್ನು ಮಾಡಿದ್ದು, ಇಂದು ಇತಿಹಾಸ, ಎಂ.ಡಿ.ಎ. ಎಂಬ ಹೆಸರಿನಲ್ಲಿ ಪ್ರಾರಂಭಗೊಂಡು ಹಲವು ವರ್ಷಗಳ ಕಾಲ ಸಾಮಾಜಿಕ ನಾಟಕಗಳನ್ನು ಅಭಿನಯಿಸಿ ಪ್ರಸಿದ್ಧಿಗೆ ಬಂದಿದ್ದ ಈ ಹವ್ಯಾಸಿ ರಂಗಸಂಸ್ಥೆ ಇಂದು ಸ್ಥಗಿತವಾಗಿದೆ. ಈ ಸಂಸ್ಥೆಯ ಪ್ರಮುಖರಲ್ಲಿ ದಿ.ಗರುಡಾಚಾರ್, ದಿ. ತ್ಯಾಗರಾಜ್ ಇಂದಿನ ಕೆ.ಪ್ರಹ್ಲಾದರಾವ್

ಮುಖ್ಯರಾದವರು. ಅನಂತರ ಕಾಣಿಸಿಕೊಂಡ ಪ್ರಕಾಶ್‌ಕಲಾಸಂಘ ಹತ್ತಾರು ಸಾಮಾಜಿಕ ನಾಟಕಗಳನ್ನು ಪ್ರದರ್ಶಿಸಿ ರಾಜ್ಯದ ಇತರ ಭಾಗಗಳಲ್ಲಿಯೂ ಹೊರರಾಜ್ಯಗಳಲ್ಲಿಯೂ ಸ್ಪರ್ಧೆಗಳಲ್ಲಿ ಭಾಗವಹಿಸಿ ಬಹುಮಾನಗಳನ್ನು ಪಡೆದಿದ್ದಾರೆ. ಇಂದಿಗೂ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿರುವ ಪ್ರಕಾಶ್‌ಕಲಾಸಂಘ, ನಾಟಕ ಸ್ಪರ್ಧೆಗಳನ್ನು ಏರ್ಪಡಿಸುತ್ತಾ ಪಿ.ವೆಂಕಟರಾಮಯ್ಯನವರ ನೇತೃತ್ವದಲ್ಲಿ ಮುನ್ನಡೆದಿದೆ. ಇನ್ನುಳಿದಂತೆ ಪಾಂಡವಪುರದ ಕುವೆಂಪುಕಲಾಸಂಘ, ನಾಗಮಂಗಲದ ಕನ್ನಡ ಸಂಘ, ಹೊಸ ಹೊಸ ನಾಟಕಗಳನ್ನು ರಂಗದ ಮೇಲೆ ತರುತ್ತಾ ರಂಗ ಶಿಬಿರಗಳನ್ನು ಏರ್ಪಡಿಸಿ ರಂಗಶಿಕ್ಷಣವನ್ನು ನೀಡುತ್ತಾ ರಾಷ್ಟ್ರೀಯ ಶಾಲೆಯ ಹಾಗೂ ನಿನಾಸಂನ ಪದವೀಧರರನ್ನು ನಿರ್ದೇಶಕರನ್ನಾಗಿಸಿಕೊಂಡು ಶಿಸ್ತು ಬದ್ಧವಾಗಿ ನಾಟಕಗಳನ್ನು ಪ್ರಯೋಗಿಸಿ ಜನಮನ್ನನೆಯನ್ನು ಗಳಿಸಿಕೊಂಡಿವೆ. ಗ್ರಾಮೀಣ ಪ್ರದೇಶಗಳಲ್ಲಿ ಕೆಲವು ಕಾಲ ಚಟುವಟಿಕೆಯಿಂದಿದ್ದು, ಕ್ಯಾತನಹಳ್ಳಿಯ ಹಸಿರು ಕಲಾವಿದರು ಹಾಗೂ ಹುಲಿವಾನದ ಕಲಾರಂಗದ ಕೊಡುಗೆಗಳನ್ನು ಮರೆಯುವ ಆಗಿಲ್ಲ.

ಇನ್ನು ಹತ್ತಾರು ಹವ್ಯಾಸಿರಂಗ ತಂಡಗಳು ಅಲ್ಲಲ್ಲಿ ಹವ್ಯಾಸಿ ರಂಗಭೂಮಿಗೆ ಸಲ್ಲಿಸಿದ್ದ ಸೇವೆಯನ್ನು ಮರೆಯುವ ಆಗಿಲ್ಲ. ೧೯೭೦ರ ದಶಕ ಬೆಂಗಳೂರಿನ ಹವ್ಯಾಸಿ ರಂಗಭೂಮಿಗೆ ಒಂದು ಹೊಸ ಮೆರಗನ್ನು ಮತ್ತು ಆಯಾಮವನ್ನು ತಂದುಕೊಟ್ಟಿತ್ತು. ಹೊಸತಂತ್ರಗಳ ಮೂಲಕ ಪ್ರದರ್ಶನಗೊಂಡ ದೊರೆ ಈಡಿಪಸ್, ಜೋಕುಮಾರಸ್ವಾಮಿ, ಸಂಕ್ರಾಂತಿ ಮುಂತಾದ ನಾಟಕಗಳು ಇಂತಹ ಹತ್ತಾರು ನಾಟಕಗಳನ್ನು ವ್ಯವಸ್ಥಿತವಾಗಿ ಪ್ರಯೋಗಿಸಿದ ರಂಗತಂಡಗಳಾದ ಬೆನಕ, ರಂಗಸಂಪದ ನಟರಂಗ ಮುಂತಾದ ತಂಡಗಳು ಜಿಲ್ಲಾ ಕೇಂದ್ರಗಳ ರಂಗಾಸಕ್ತರ ನೆರವಿನಿಂದ ಆಯಾಯ ಜಿಲ್ಲಾ ಕೇಂದ್ರಗಳಲ್ಲಿ ಪ್ರದರ್ಶನಗೊಂಡು ಈ ಹೊಸ ಬಗೆಯ ಆವಿಷ್ಕಾರಗಳಿಗೆ ವಿದ್ಯಾವಂತರು ಒಗ್ಗಿ ಆಯಾ ಜಿಲ್ಲಾ ಕೇಂದ್ರಗಳಲ್ಲಿಯೂ ಹವ್ಯಾಸಿ ರಂಗ ತಂಡಗಳು ಪ್ರಾರಂಭವಾಗಲು ಕಾರಣವಾದವು.

ಮಂಡ್ಯ ಜಿಲ್ಲೆಯ ಹವ್ಯಾಸಿ ರಂಗಭೂಮಿಯಲ್ಲಿ ೭೦ರ ಕೊನೆಯ ಭಾಗ ಮತ್ತು ೮೦ ರ ದಶಕರ ಮೊದಲ ಭಾಗ ಬಹುಮುಖ್ಯವಾದ ಕಾಲಘಟ್ಟವೆನ್ನಬಹುದು. ಬೆಂಗಳೂರಿನ ಹವ್ಯಾಸಿ ರಂಗಭೂಮಿಯಿಂದ ಪ್ರೇರಿತರಾದ ಪಿ.ಇ.ಎಸ್. ಕಾಲೇಜಿನ ಕನ್ನಡ ಉಪನ್ಯಾಸಕ ಜಯಪ್ರಕಾಶ್‌ಗೌಡ ಮತ್ತು ಅವರ ಸ್ನೇಹಿತ ಶಿವರಾಂ ಉಪನ್ಯಾಸಕರಾದ ರಾಮೇಗೌಡ, ಕೆ.ಸ್. ಚಂದ್ರಶೇಖರ್ ಮುಂತಾದವರೊಡಗೂಡಿ ಪ್ರಾರಂಭಿಸಿದ ಗೆಳೆಯರ ಬಳಗ ಮಂಡ್ಯ ಜಿಲ್ಲೆಯ ಹವ್ಯಾಸಿ ರಂಗಭೂಮಿಯಲ್ಲಿ ಒಂದು ಮೈಲಿಗಲ್ಲಾಯಿತು. ಕಾಲೇಜು ವಿದ್ಯಾರ್ಥಿಗಳನ್ನು ಹಾಗೂ ಹಲವಾರು ಯುವಕರನ್ನು ಸಂಘಟಿಸಿ ರಾಷ್ಟ್ರೀಯ ನಾಟಕ ಶಾಲೆಯ ಅಶೋಕಬಾದರದಿನ್ನಿರವರ ನೇತೃತ್ವದಲ್ಲಿ ಒಂದು ತಿಂಗಳ ಕಾಲ ರಂಗಶಿಬಿರವನ್ನು ಏರ್ಪಡಿಸಿ, ರಂಗತಾಲೀಮು ಮಾಡಿಸಿ ಸಂಕ್ರಾಂತಿ ಮತ್ತು ಧನಿ ಇಲ್ಲದವರು ಎಂಬ ಎರಡು ನಾಟಕಗಳನ್ನು ಪ್ರಯೋಗಿಸಿದ್ದು, ಇಂದಿಗೂ ದಾಖಲೆಯೇ. ನಾಟಕ ಪ್ರಯೋಗಿಸಿದ್ದು,

ಮುಖ್ಯವಲ್ಲದೆ ಸದಭಿರುಚಿಯ ಪ್ರೇಕ್ಷಕರನ್ನು ರೂಪಿಸಿದ ಯಶಸ್ಸು ಗೆಳೆಯರ ಬಳಗಕ್ಕೆ ಸೇರುತ್ತದೆ. ಹತ್ತಾರು ಯುವಕರನ್ನು ಶಿಸ್ತು ಬದ್ದುಗೊಳಿಸಿದ್ದು, ರಂಗತಾಲೀಮುಗಳನ್ನು ಗಂಭೀರವಾಗಿ ಕರಾರುವಕ್ಕಾದ ವೇಳೆಗೆ ನಾಟಕ ಮುಗಿಸುವಂತದ್ದು ಮುಂತಾದವುಗಳ ಪಾಲನೆಗೆ ಕಾರಣವಾಗಿಸಿದ ಕೀರ್ತಿಯು ಈ ಸಂಘಟನೆಗೆ ಸಲ್ಲುತ್ತದೆ. ಈ ಸಂಘಟನೆಯ ಆಶ್ರಯದಲ್ಲಿ ಈ ನಾಡಿನ ಬಹುತೇಕ ರಾಷ್ಟ್ರೀಯ ನಾಟಕ ಶಾಲೆಯ ನಿರ್ದೇಶಕರು ನಾಟಕ ನಿರ್ದೇಶಿಸಿದ್ದಾರೆ. ಕನಾಟಕದ ಉದ್ದಗಲಕ್ಕೂ ಈ ಸಂಘಟನೆ ತನ್ನ ನಾಟಕಗಳನ್ನು ತೆಗೆದುಕೊಂಡು ಹೋಗಿ ಪ್ರದರ್ಶಿಸಿ ಯಶಸ್ವಿ ತಂಡಗಳಲ್ಲೊಂದು ಎಂದೆನಿಸಿದೆ. ಈ ಸಂಘಟನೆಯ ಆಶ್ರಯದಲ್ಲಿ ಬೆಳೆದ ಬಹಳಷ್ಟು ಕಲಾವಿದರು ಪ್ರತಿಭಾವಂತ ನಟರಾಗಿ ಮಂಡ್ಯದಲ್ಲಿ ಮನೆ ಮಾತಾಗಿದ್ದಾರೆ. ಇಂದಿನ ಟಿ.ವಿ. ಹಾಗೂ ಸಿನಿಮಾ ನಟರಾದ ರಮೇಶ್ ಈ ಸಂಘಟನೆಯ ಮೂಲಕ ಬೆಳೆದವರೆಂಬುದು ಬಹುಜನಕ್ಕೆ ತಿಳಿದಿಲ್ಲ. ಹಲವು ವರ್ಷಗಳ ಕಾಲ ಯಶಸ್ಸಿನ ಮೆಟ್ಟಿಲೇರುತ್ತಾ ಸಾಗಿದ ಸಂಘಟನೆಗೆ ಗ್ರಹಚಾರ ಒದಗಿ ಬಂದಿದ್ದು ದೊಡ್ಡ ದುರಂತವೇ ಸರಿ. ಯಾವುದೇ ಸಂಘಟನೆ ಯಶಸ್ಸಿನ ತುತ್ತ ತುದಿಗೇರಿದಾಗ ಭಿನ್ನಾಭಿಪ್ರಾಯಗಳು ಮೂಡಿ ಬಿರುಕುಂಟಾಗುವುದು ಸಹಜವೇ. ಇಂತಹ ಬಿರುಕು ಈ ಸಂಘಟನೆಯಲ್ಲೂ ಕಾಣಿಸಿಕೊಂಡು ಅದರ ಸಂಸ್ಥಾಪಕರಲ್ಲೊಬ್ಬರಾದ ಜಯಪ್ರಕಾಶ್‌ಗೌಡರು ಹೊರ ಬಂದು 'ಜನದನಿ' ಎಂಬ ಸಾಂಸ್ಕೃತಿಕ ಸಂಘಟನೆಯೊಂದನ್ನು ಪ್ರಾರಂಭಿಸಿದ್ದು, ಮಂಡ್ಯದ ಹವ್ಯಾಸಿರಂಗಭೂಮಿಗೆ ಮತ್ತೊಂದು ಮೈಲಿಗಲ್ಲಾಗಿದೆ. ಅನೇಕ ಪ್ರಶಸ್ತಿಗಳನ್ನು ಸ್ಥಾಪಿಸಿ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳನ್ನು ನಡೆಸುತ್ತಾ ರಂಗಭೂಮಿಯನ್ನು ಮುಖ್ಯವಾಗಿರಿಸಿಕೊಂಡಿದ್ದು ಕೇವಲ ಹತ್ತು ವರ್ಷಗಳು ತುಂಬುವ ಮುಂಚಿತವಾಗಿಯೇ ನಾಡಿನ ರಂಗಾಸಕ್ತರ ಗಮನವನ್ನು ಸೆಳೆದ ಜನದನಿ ಅನೇಕ ಯಶಸ್ವಿ ನಾಟಕಗಳನ್ನು ಪ್ರಯೋಗಿಸಿದೆ. ಪ್ರಖ್ಯಾತ ನಿರ್ದೇಶಕರಾದ ಸಿ.ಬಸವಲಿಂಗಯ್ಯ, ಅಶೋಕಬಾದರದಿನ್ನಿ, ಮಾಲತೇಶಬಡಿಗೇರ್, ಪ್ರಮೋದ್‌ಶಿಗ್ಗಾಂವ್ ಮುಂತಾದ ರಂಗನಿರ್ದೇಶಕರು ಈ ಸಂಸ್ಥೆಯ ಅಡಿಯಲ್ಲಿ ನಾಟಕಗಳನ್ನು ನಿರ್ದೇಶಿಸಿದ್ದಾರೆ. ಅಂತಿಗೊನೆ, ಸಾಯೋಜಾಜ್ರೆ, ತಿರುಕರಾಜ, ಸುಲ್ತಾನ್‌ಟಿಪ್ಪು, ಸ್ಮಶಾನ ಕುರುಕ್ಷೇತ್ರ ಮುಂತಾದವು ಈ ಸಂಸ್ಥೆ ಪ್ರಯೋಗಿಸಿದ ಮುಕ್ಯ ನಾಟಕಗಳು. ಈ ಎಲ್ಲಾ ನಾಟಕಗಳು ನಾಟಕದ ಬೇರೆ ಬೇರೆ ಭಾಗಗಳಲ್ಲಿ ಪ್ರಯೋಗಿಸಿಕೊಂಡು ಜನಮನ್ನಣೆಗಳಿಸಿವೆ. ಅದರಲ್ಲೂ ಸುಲ್ತಾನ್ ಟಿಪ್ಪು ನಾಯಕ ತನ್ನ ಶ್ರೀಮಂತಿಕೆ ಅಭಿನಯ ಸಾಮರ್ಥ್ಯ, ತಂತ್ರಕೌಶಲ್ಯಗಳಿಂದಾಗಿ ಇಡೀ ಮಂಡ್ಯದಲ್ಲಿ ಅಪಾರವಾದ ಜನಮನ್ನಣೆಯನ್ನು ಗಳಿಸಿತು. ಈ ನಾಟಕದ ಮೂಲಕ ಅಪಾರ ಹೆಸರುಗಳಿಸಿದರವಲ್ಲಿ ಮಹದೇವಯ್ಯ, ಎಚ್.ಎಂ.ರವಿಪ್ರಸಾದ್, ಕು.ಎಚ್.ಆರ್.ರಮ್ಯ, ಕೋಣನಹಳ್ಳಿಚಂದ್ರಶೇಖರ್ ಮುಂತಾದವು ಪ್ರಮುಖರಾಗಿದ್ದಾರೆ. ಗೆಳೆಯರ ಬಳಗದಿಂದ ಪ್ರಾರಂಭಗೊಮಡು ಜನದನಿವರೆಗಿನ ರಂಗಪ್ರದರ್ಶನಗಳಲ್ಲಿ

ಹಲವಾರು ಯುವಕರು ಉತ್ತಮ ನಟರಾಗಿ ಸೈ ಅನ್ನಿಸಿಕೊಂಡಿದ್ದಾರೆ. ಶ್ರೀಮೋಹನ್‌ರಾಜ್, ಲೈಬ್ರರಿಶಿವರಾಂ, ಸಿ.ಎಸ್. ರಾಮಕೃಷ್ಣ, ಕಾಂತರಾಜ್, ಎಂ.ಬಾಲಕೃಷ್ಣ, ಎಚ್.ಎಂ.ಶ್ರೀನಿವಾಸ್, ಪುಟ್ಟಬುದ್ಧಿ, ಮೆಲೋಡಿಸೋಮು, ಮುನಿಸಿಪಾಲಿಟಿ ಸೋಮು ಮುಂತಾದವರು ಮುಖ್ಯರಾಗಿದ್ದಾರೆ. ಮಂಡ್ಯದ ಸ್ವರ್ಣಸಂದ್ರದ ರಂಗಚಾವಡಿ, ಬಹುರಂಗ, ಮಿತ್ರಕಲಾವೃಂದ ಮುಂತಾದ ಹವ್ಯಾಸಿರಂಗ ತಂಡಗಳೂ ಇವೆ.

ಹಿನ್ನೆಲೆಗಾಯಕರಾಗಿ ಪ್ರಸಿದ್ಧಿಗೆ ಬಂದಿರುವ ಶ್ರೀ ಎಲ್.ಎಲ್.ಶಾಸ್ತ್ರಿ ಈ ಸಂಘಟನೆಗಳಿಂದ ರೂಪ ತಳೆದವರೇ ಇಂದು ಟಿ.ವಿ. ಚಲನಚಿತ್ರರಂಗಗಳಲ್ಲಿ ಉದಯೋನ್ಮುಖ ಕಲಾವಿದರಾಗಿ ಕೆಲಸ ಮಾಡುತ್ತಿರುವ ಬಹಳಷ್ಟು ಮಂದಿಗೆ ವೇದಿಕೆಯನ್ನೊದಗಿಸಿದ್ದು, ಈ ಸಂಘಟನೆಗಳೇ ಇಂದು ಈ ಸಂಘಟನೆಗಳಿಂದ ಬೇರೆಯಾಗಿ ಬಸ್‌ಕುಮಾರ್ ಹಾಗೂ ಇನ್ನಿತರೆ ಯುವಕರು ಕೆಲವರು. ಪ್ರಾರಂಭಿಸಿರುವ ಅಭಿಜಾತ ರಮಗಸಂಸ್ಥೆ ಹವ್ಯಾಸಿರಂಗ ಭೂಮಿಯಲ್ಲಿ ಉರುಪಿನಿಂದ ಕೆಲಸ ಮಾಡಲು ಪ್ರಾರಂಭಿಸಿದೆ. ಇತ್ತೀಚೆಗೆ ಹಲವಾರು ಯುವಕರು ರಂಗಭೂಮಿಯ ಕಡೆ ಮನಸ್ಸು ಮಾಡುತ್ತಿರುವುದು ಸಂತೋಷದ ಸಂಗತಿ. ನಿನಾಸಂ ರಂಗಶಿಕ್ಷಣ ಕೇಂದ್ರದ ಕಡೆಗೆ ನಮ್ಮ ಹುಡುಗರು ಮನಸ್ಸು ಮಾಡುತ್ತಿರುವುದು ಸಂತಸದ ಸಂಗತಿ. ನಿನಾಸಂ ರಂಗಶಿಕ್ಷಣ ಕೇಂದ್ರದಲ್ಲಿ ತರಬೇತಿ ಪಡೆದ ಮಂಡ್ಯದ ಚೆನ್ನಕೇಶವ ಈಗಾಗಲೇ ಭರವಸೆ ಮೂಡಿಸುವ ರಂಗ ನಿರ್ದೇಶಕರಾಗಿದ್ದಾರೆ. ಇವರ ಜೊತೆಗೆ ಮಳವಳ್ಳಿಯ ಮಧುಕರ್, ಯಡಗನಹಳ್ಳಿಯ ಹನುಮಂತು, ಶಿವಕುಮಾರ್, ರಂಗಶಿಕ್ಷಣ ಕ್ಷೇತ್ರದಲ್ಲಿ ಕಲಿತು ಬಂದು ರಂಗಭೂಮಿಯಲ್ಲಿ ನಿರತರಾಗಿದ್ದಾರೆ.

ಮಂಡ್ಯ ಜಿಲ್ಲೆಯ ರಂಗಭೂಮಿಯ ಇತಿಹಾಸದಲ್ಲಿ ನಾಡಿನ ಹಿರಿಯ ನಟರಾಗಿದ್ದ ದಿ.ಕೆ.ವಿ.ಶಂಕರಗೌಡರ ಹೆಸರು ಮುಖ್ಯವಾದುದು. ರಾಜಕಾರಣಿಯಾಗಿ, ಕಲಾವಿದರಾಗಿ, ನಾಟಕದ ಕರ್ತೃವಾಗಿ ನಿರ್ದೇಶಕರಾಗಿ ಸ್ವಲ್ಪ ಮಟ್ಟಿನ ನೇಪತ್ಯ ಪರಿಣಿತರಾಗಿ ಬಹುಮುಖ ವ್ಯಕ್ತಿತ್ವವನ್ನು ಹೊಂದಿದ್ದ ಗೌಡರು ಕಲಾಪೋಷಕರೆಂಬ ಬಿರುದಿಗೆ ಪಾತ್ರರಾಗಿದ್ದರು. ವೃತ್ತಿ, ಗ್ರಾಮೀಣ, ಹವ್ಯಾಸಿ ರಂಗಭೂಮಿಗಳ ಕಸುವುಗಳನ್ನು ಒಟ್ಟಿಗೆ ಮೈಗೂಡಿಸಿಕೊಂಡಿದ್ದ ಶಂಕರಗೌಡರಿಗೆ ನಾಟಕಗಳೆಂದರೆ ಪಂಚಪ್ರಾಣ. ತನ್ನ ಓರಗೆಯ ಬಹಳಷ್ಟು ರಾಜಕಾರಣಿಗಳಲ್ಲಿ ರಮಗಾಸಕ್ತಿಯನ್ನು ಮೂಡಿಸಿದ ಕೀರ್ತಿ ಇವರಿಗೆ ಸಲ್ಲಬೇಕು. ಶಂಕರಗೌಡರಿಗೆ ನಾಟಕ ಕೇವಲ ಮನರಂಜನೆಯಷ್ಟೇ ಅಲ್ಲ ಅದು ಬೋಧಪ್ರದವೂ ಹೌದು. ಧನ ಸಂಗ್ರಹಣೆಯ ಮಾರ್ಗವೂ ಕೂಡ. ತಾವೇ ರಚಿಸಿ ನಿರ್ದೇಶಿಸಿದ "ಪಾದುಕ ಕಿರೀಟ" ನಾಟಕದಲ್ಲಿನ ದಶರಥನ ಪಾತ್ರ ಅವರಿಗೆ ಅಪಾರ ಕೀರ್ತಿಯನ್ನು ತಂದಿದೆ. ದಾನಶೀಲ ಕರ್ಣದ ಕರ್ಣನ ಪಾತ್ರ ಇಂದಿಗೂ ಈ ಜಿಲ್ಲೆಯ ಮನೆ ಮಾತಾಗಿದೆ. ಶಂಕರಗೌಡರ ವಿಶೇಷವೆಂದರೆ ಭಾವಪೂರ್ಣ ಅಭಿನಯ. ತನ್ನ ಅಭಿನಯದ ಎತ್ತರಕ್ಕೆ ತನ್ನ ಸಹಪಾತ್ರಧಾರಿಗಳನ್ನು ಮೇಲಕ್ಕೊಯ್ಯಬೇಕೆಂಬ ವಾಂಛೆ. ಎಲ್ಲಕ್ಕಿಂತ ಮಿಗಿಲಾಗಿ ತಮ್ಮ ರಂಗ

ಪ್ರದರ್ಶನದ ಮೂಲಕ ಧನ ಸಂಗ್ರಹಿಸಿ ಆ ಮೂಲಕ ಮಂಡ್ಯದಲ್ಲಿ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿದ ಹೆಗ್ಗಳಿಕೆ ತನ್ನ ನಂತರವೂ ಮಂಡ್ಯದ ಹವ್ಯಾಸಿರಂಗಭೂಮಿಗೆ ಒಂದು ಹೊಸ ಆಯಾಮವನ್ನು ಸೃಷ್ಟಿಸಿದ ಗೆಳೆಯರ ಬಳಗದ ಮಹಾಪೋಷಕರಾಗಿ ರಂಗಪ್ರದರ್ಶನಕ್ಕೆ ತೊಂದರೆಯಾಗುತ್ತಿದ್ದದನ್ನು ಗಮನಿಸಿ ತಕ್ಷಣವೇ ಸ್ವಾಮಿವಿವೇಕಾನಂದ ರಂಗಮಂದಿರವನ್ನು ಸಜ್ಜುಗೊಳಿಸಿದ್ದು ಸಾಕ್ಷಿಯಾಗಿದೆ.

ಒಟ್ಟಾರೆಯಾಗಿ ಮಂಡ್ಯಜಿಲ್ಲೆ ರಂಗಭೂಮಿಗೆ ಅಪಾರವಾದ ಕೊಡುಗೆಯನ್ನು ನೀಡಿದೆ. ರಂಗಭೂಮಿಯನ್ನು ಇನ್ನೂ ಜೀವಂತವಾಗಿರಿಸಿದೆ. ಹಾಗೆಯೇ ಮಂಡ್ಯ ಜಿಲ್ಲೆ, ಕೆ.ಆರ್.ಪೇಟೆ ತಾಲ್ಲೂಕಿನ ಅಕ್ಕಿಹೆಬ್ಬಾಳು ಹೋಬಳಿಯ ಗ್ರಾಮವಾದ ಗುಬ್ಬಹಳ್ಳಿ ನಾಟಕ ಕಲೆಯಿಂದ ಹೊರತಾಗಿಲ್ಲ. ಇಲ್ಲಿಯೂ ನಾಟಕದ ಕಲೆ ಒಂದು ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ.

ಗುಬ್ಬಹಳ್ಳಿ ಗ್ರಾಮದಲ್ಲಿ ಜನಪದರಂಗಭೂಮಿ ಕಂಡುಬರುತ್ತದೆ. ಇಲ್ಲಿಯ ಜನರಲ್ಲಿ ಜನಪದ ರಂಗಭೂಮಿಯ ಆಸಕ್ತಿ ಇರುವುದು ತೋರುತ್ತದೆ. ಇಲ್ಲಿ ಬೇಸಿಗೆ ಬಂತೆಂದರೆ ಇಡೀ ಗುಬ್ಬಹಳ್ಳಿ ಗ್ರಾಮವೇ ರಂಗಭೂಮಿಯಾಗಿ ಪರಿವರ್ತಿತಗೊಂಡು ಸಾಮೂಹಿಹ ಪ್ರಕ್ರಿಯೆಯಲ್ಲಿ ಇಡೀ ಗ್ರಾಮ ತೊಡಗಿಕೊಳ್ಳುವುದು ನಿಜಕ್ಕೂ ಆಶ್ಚರ್ಯವನ್ನುಂಟು ಮಾಡುತ್ತದೆ. ತಮ್ಮದೇ ಹಣ, ತಮ್ಮದೇ ಅಭಿನಯ, ತಮ್ಮದೇ ವೇದಿಕೆಗಳ ಮೂಲಕ, ನಾಟಕಗಳನ್ನಾಡಿ ರಾಮ–ರಾವಣ, ಕೃಷ್ಣ–ಅರ್ಜುನ, ಭೀಮ–ದುರ್ಯೋಧನರ ಗುಂಗಿನಲ್ಲಿ ಮೆರೆದಾಡುತ್ತಾ ಕೆಲವು ದಿನಗಳ ಕಾಲ ಆ ಗುಂಗಿನಲ್ಲಿಯೇ ಇರುತ್ತಾರೆ. ಇಲ್ಲಿಯ ಜನ ಈ ಪರಿಯನ್ನು ನೊಡಿದಾಗ ರಂಗಭೂಮಿಯ ಬಗ್ಗೆ ಈ ಗ್ರಾಮದ ಜನರಿಗೆ ಎಷ್ಟೊಂದು ಅಗಾಧವಾದ ಪ್ರೀತಿ ಇದೆಯೆಂದು ಆಶ್ಚರ್ಯವಾಗುತ್ತದೆ. ಈ ತೆರನಾದ ರಂಗಸಜ್ಜಿಕೆಯನ್ನು ವೃತ್ತಿರಂಗಭೂಮಿಯಲ್ಲಾಗಲೀ, ಹವ್ಯಾಸಿರಂಗ ಭೂಮಿಯಲ್ಲಾಗಲೀ ಕಾಣಲು ಸಾಧ್ಯವಿಲ್ಲ. ಹವ್ಯಾಸಿ ರಂಗಭೂಮಿಯಂತೆ ನಿಯಮಬದ್ಧತೆಯಾಗಲಿ, ಕಾಲನಿರ್ದಿಷ್ಟವಾಗಲೀ ಇಲ್ಲ. ಬೇಸಿಗೆಯಲ್ಲಿ ಕೃಷಿ ಕಾರ್ಯ ಸ್ಥಗಿತಗೊಳ್ಳುವ ಕಾರಣ ತಮ್ಮ ಬಿಡುವಿನ ವೇಳೆಯನ್ನು ಈ ರೀತಿಯಲ್ಲಿ ಉಪಯೋಗಿಸಿಕೊಳ್ಳುವ ಈ ಹಳ್ಳಿಯ ಗ್ರಾಮಸ್ಥರು ಕತ್ತಲಾಗುತ್ತಿದ್ದಂತೆಯೇ ಊರಿನಲ್ಲಿ ಖಾಲಿ ಇರುವ ಯಾವುದಾದರೂ ಒಂದು ಮನೆಯನ್ನೋ ಅಥವಾ ದೇವಸ್ಥಾನವನ್ನೋ ಆಯ್ಕೆ ಮಾಡಿಕೊಂಡು ಅಲ್ಲಿ ತಾವು ಇಷ್ಟಪಟ್ಟು ನಾಟಕವನ್ನು ಅಭ್ಯಾಸ ಮಾಡುತ್ತಾರೆ. ಹೀಗೆ ನಾಟಕ ಕಲಿಯುವ ಮನೆಗೆ 'ನಾಟಕದಮನೆ' ಅಥವಾ 'ಮೇಳದಮನೆ' ಎಂದು ಕರೆಯುತ್ತಾರೆ.

ಈ ಗ್ರಾಮಸ್ಥರು ಸಾಮಾನ್ಯವಾಗಿ ಆರಿಸಿಕೊಳ್ಳುವ ನಾಟಕಗಳು ರಾಮಾಯಣ ಮತ್ತು ಮಹಾಭಾರತ ಕಾವ್ಯ ಮೂಲಗಳ ಪೌರಾಣಿಕ ಪ್ರಸಂಗಗಳನ್ನು ಐತಿಹಾಸಿಕ

ನೆಲೆಗಳಿಂದ ಆರಿಸಿಕೊಂಡ ವಸ್ತುಗಳೇ ಹೆಚ್ಚಾಗಿ ಕಂಡುಬರುತ್ತವೆ. ಕೆಲವು ಸಂದರ್ಭಗಳಲ್ಲಿ ಇಲ್ಲಿನ ಕೆಲವು ಯುವಕರು ಸಮಾಜಿಕ ನಾಟಕಗಳನ್ನು ಮಾಡಿದ ಉದಾಹರಣೆಗಳಿವೆ. ಆದರೆ ಇಲ್ಲಿಯ ಜನರಿಗೆ ಸಾಮಾಜಿಕ ನಾಟಕಗಳು ಪೌರಾಣಿಕ ನಾಟಕಗಳಷ್ಟು ರುಚಿಸಿದಂತೆ ಕಂಡುಬರುವುದಿಲ್ಲ. ಆದ್ದರಿಂದ ಸಾಮಾನ್ಯವಾಗಿ ಅವರ ಒಲವು ಪೌರಾಣಿಕ ನಾಟಕಗಳ ಕಡೆಯೇ ಎಂದು ಹೇಳಬಹುದಾಗಿದೆ. ಇಲ್ಲಿನ ಜನರ ದೃಷ್ಟಿಯಲ್ಲಿ ರಂಗಗೀತೆಗಳು, ಕಂದಪದ್ಯಗಳು, ಬಿಲ್ಲು, ಬಾಣ, ಗದೆ, ಕಿರೀಟ ಮೊದಲಾದವುಗಳು ಇಲ್ಲದ ನಾಟಕ ನಾಟಕವೇ ಅಲ್ಲ.

ಗ್ರಾಮದ ಗ್ರಾಮದೇವತೆಯಾದ ದೇವೀರಮ್ಮನ ಹಬ್ಬಕ್ಕೆ, ಬಸವಜಯಂತಿ, ಯುಗಾದಿ ಮೊದಲಾದ ಹಬ್ಬಗಳ ಸಂದರ್ಭಗಳಲ್ಲಿ ರಾಮಾಯಣ, ಮಹಾಭಾರತ ಮೊದಲಾದ ನಾಟಕಗಳನ್ನು ಆಡುತ್ತಾರೆ. ಒಂದು ನಾಟಕಕ್ಕೆ ಅಣಿಗೊಳ್ಳಲು ಮೂರರಿಂದ ನಾಲ್ಕು ತಿಂಗಳುಗಳ ಕಾಲ ಅಭ್ಯಾಸ ಮಾಡುತ್ತಾರೆ. ಇವರಿಗೆ ನಾಟಕ ಕಲಿಸಲು ನಾಟಕದ ನಿರ್ದೇಶಕರೊಬ್ಬರು ಇರುತ್ತಾರೆ. ಇವರು ಹಾರ್ಮೋನಿಯಂ ವಾದಕರೂ ಆಗಿ ಸಂಭಾಷಣೆ, ಅಭಿನಯ ಮತ್ತು ಸಂಗೀತಗಾರರಾಗಿಯೂ ಕೆಲಸ ನಿರ್ವಹಿಸುತ್ತಾರೆ. ಇಂತಹ ವರ್ಗದ ನಿರ್ದೇಶಕರನ್ನು ನಾಟಕದ ಮೇಷ್ಟ್ರು ಎಂದು ಕರೆಯಲಾಗುತ್ತದೆ. ಇದೊಂದು ಪಾರಿಭಾಷಿಕ ಶಬ್ದವಾಗಿ ನಾಟಕದ ಮೇಷ್ಟ್ರು ಎಂದ ಕೂಡಲೇ ಗ್ರಾಮೀಣ ರಂಗಭೂಮಿಯ ಪ್ರಮುಖ ನಿರ್ವಾಹಕನಾಗಿ ತಟ್ಟನೆ ಆ ಕಲ್ಪನೆಯನ್ನು ಮನದಲ್ಲಿ ಮಾಡಿಕೊಳ್ಳಲಾಗುತ್ತದೆ. ಇಂತಹ ನಾಟಕದ ಮೇಷ್ಟ್ರೊಬ್ಬರು ಈ ಗುಬ್ಬಹಳ್ಳಿ ಗ್ರಾಮದಲ್ಲಿದ್ದಾರೆ. ಅವರ ಪರಿಚಯವನ್ನು ಮಾಡಿಕೊಳ್ಳೋಣ.

**ನಾಟಕದ ಮೇಷ್ಟ್ರು ಲಿಂಗಪ್ಪ**

ಇದೇ ಗುಬ್ಬಹಳ್ಳಿ ಗ್ರಾಮದ ಲಿಂಗಾಯಿತ ಜನಾಂಗಕ್ಕೆ ಸೇರಿದ ಅಂಕಪ್ಪ ಮತ್ತು ಸುಬ್ಬಮ್ಮ ದಂಪತಿಗಳಿಗೆ ಇಬ್ಬರು ಮಕ್ಕಳು. ಒಂದು ಹೆಣ್ಣು, ಒಂದು ಗಂಡು, ಹೆಣ್ಣುಮಗಳ ಹೆಸರು ನಿಂಗಾಜಮ್ಮ, ಗಂಡು ಮಗನ ಹೆಸರು ಲಿಂಗಪ್ಪ ಎಂದು ಈ ಲಿಂಗಪ್ಪನವರೇ ಗುಬ್ಬಹಳ್ಳಿಯ ನಾಟಕದ ಮೇಷ್ಟ್ರು.

ಲಿಂಗಪ್ಪನವರು ಹೈಸ್ಕೂಲ್ ಶಿಕ್ಷಣವನ್ನು ಪಡೆದುಕೊಂಡವರು ನಂತರದ ದಿನಗಳಲ್ಲಿ ಸಂಗೀತ ಕಲೆಯಲ್ಲಿ ಆಸಕ್ತಿ ಹುಟ್ಟಿ ಹಾರ್ಮೋನಿಯಂ ವಾದನವನ್ನು ಕಲಿತುಕೊಂಡರು. ಅದರಲ್ಲಿ ಅವರದು ಪಳಗಿದ ಕೈಯಾಯಿತು. ಇವರು ತಮ್ಮ ಇಪ್ಪತ್ತೈದನೆಯ ವಯಸ್ಸಿನಿಂದಲೇ ಜನಪದ ರಂಗಭೂಮಿಯ ಕಡೆಗೆ ತಿರುಗಿದರು. ಹೀಗೆ ಇವರು ತಮ್ಮ ಇಪತ್ತೈದನೆಯ ವಯಸ್ಸಿನಿಂದಲೇ ನಾಟಕಗಳನ್ನು ಕಲಿಸಲು ಪ್ರಾರಂಭಿಸಿ, ನಾಟಕ ಮೇಷ್ಟ್ರು ಲಿಂಗಪ್ಪನವರು ಎಂದು ಪ್ರಸಿದ್ಧಿಯಾದರು.

ಈ ನಾಟಕದ ಮೇಷ್ಟು ಲಿಂಗಪ್ಪನವರು ಸುಮಾರು ಹನ್ನೆರಡು ನಾಟಕಗಳನ್ನು ಕಲಿಸುತ್ತಾರೆ. ಅವುಗಳೆಂದರೆ, ರಾಮಾಯಣ, ಸಂಕ್ಷಿಪ್ತಮಹಾಭಾರತ, ಕುರುಕ್ಷೇತ್ರ, ದಾನಶೂರಕರ್ಣ, ಸುಭದ್ರಾಪರಿಣಯ, ಸದಾರಮೆ, ಶನಿಮಹಾತ್ಮೆ, ಶಿವಜಲಂದರ, ತ್ರಿಜನ್ಮಮೋಕ್ಷ, ರಾಜಸೂಯಯಾಗ, ಗಯಚರಿತ್ರೆ, ರಾಜವಿಕ್ರಮ ಹೀಗೆ ಮೊದಲಾದ ನಾಟಕಗಳನ್ನು ಇವರು ಕಲಿಸುತ್ತಾರೆ.

ಇವರು ತಮ್ಮ ಸ್ವಗ್ರಾಮವಾದ "ಗುಬ್ಬಹಳ್ಳಿಯಲ್ಲಿ ರಾಮಾಯಣ, ಮಹಾಭಾರತ, ಕುರುಕ್ಷೇತ್ರ ಮೊದಲಾದ ನಾಟಕಗಳನ್ನು ಯಶಸ್ವಿಯಾಗಿ ಆಡಿಸಿದ್ದಲ್ಲದೆ, ಸುತ್ತಮುತ್ತಲ ಗ್ರಾಮಗಳಾದ ಸಾಕ್ಷಿಬೀಡು, ಹಳೆದುಡುಕನಹಳ್ಳಿ, ಹೊಸದುಡುಕನಹಳ್ಳಿ, ಸಾರಂಗಿ, ಬಳ್ಳೇಕೆರೆ, ಮಾರ್ಗೋನಹಳ್ಳಿ, ಮೊದೂರು, ಕೈಗೋನಹಳ್ಳಿ ಹಾಗೂ ಪಕ್ಕದ ತಾಲ್ಲೂಕಿನ ಕೆ.ಆರ್.ನಗರಕ್ಕೆ ಸೇರಿದ ಎಲೆಮುದ್ದನಹಳ್ಳಿ, ಕೊಡಿಯಾಲ ಮೊದಲಾದ ಕಡೆಗಳಲ್ಲಿ ಹಲವಾರು ನಾಟಕಗಳನ್ನು ಕಲಿಸಿದೆ" ಎಂದು ತಾವು ಕಲಿಸಿದ ನಾಟಕಗಳ ಸಂಖ್ಯೆ ಸುಮಾರು ಮೂವತ್ತರಿಂದ ಮೂವತ್ತೈದು ಎಂದು ಹೇಳುತ್ತಾರೆ.

ಲಿಂಗಪ್ಪನವರು ನಾಟಕಗಳನ್ನು ಕಲಿಸುವುದರ ಜೊತೆ ಜೊತೆಗೆ ಉತ್ತಮ ಕೃಷಿಕರಾಗಿ ವ್ಯವಸಾಯವನ್ನು ಮಾಡುತ್ತಾ ಬಂದವರು ಈಗ ಲಿಂಗಪ್ಪನವರಿಗೆ ಸುಮಾರು ಎಪ್ಪತ್ತಮೂರು ವರ್ಷ ವಯಸ್ಸು, ಲಿಂಗಪ್ಪನವರಿಗೆ ಪಾರ್ವತಮ್ಮ ಎಂಬ ಪತ್ನಿ ಇರುತ್ತಾರೆ. ಇವರಿಗೆ ಒಬ್ಬ ಪುತ್ರ ಇದ್ದಾರೆ.

ಹೀಗೆ ಈ ಗುಬ್ಬಹಳ್ಳಿ ಗ್ರಾಮದ ನಾಟಕದ ಮೇಷ್ಟ್ರ ಲಿಂಗಪ್ಪನವರು ಊರಿನಲ್ಲಿ ತಮ್ಮ ವಿಶ್ರಾಂತ ಜೀವನವನ್ನು ಕಳೆಯುತ್ತಿದ್ದಾರೆ. ಈ ಗ್ರಾಮದ ಜನರಿಗೆ ಇವರನ್ನು ಕಂಡರೆ, ತಮಗೆ ನಾಟಕದ ಪಾಠ ಹೇಳಿಕೊಟ್ಟ ಗುರುಗಳು ಎಂಬ ಗೌರವ. ಅಭಿಮಾನ, ಹೀಗೆ ಲಿಂಗಪ್ಪನವರು ಗುಬ್ಬಹಳ್ಳಿಗ್ರಾಮದ ಗ್ರಾಮಸ್ಥರ ಪಲಿಗೆ ಅಚ್ಚುಮೆಚ್ಚಿನ ನಾಟಕದ ಮೇಷ್ಟ್ರೇ ಆಗಿದ್ದಾರೆ.

**ಸಂಗೀತ**

ಮಾನವ ತನ್ನ ಭಾವನೆಯನ್ನು ಅಭಿವ್ಯಕ್ತಪಡಿಸುವ ಮಾಧ್ಯಮವೇ ಕಲೆ, ಕಲೆಯು ಮಾನವನ ಮನಸ್ಸನ್ನು ಸಂಸ್ಕರಿಸುತ್ತದೆ. ಕಲೆಯ ಮೂಲ ಪ್ರಕೃತಿ ಇದರ ಗುರಿ, ಪ್ರಕೃತಿಯ ಸೌಂದರ್ಯೋಪಾಸನೆ. ಸೌಂದರ್ಯೋಪಾಸನೆಯ ಮೂಲಕವೇ ಮಾನವನ ಪ್ರತಿಭೆಯು ವಿಕಸನಗೊಳ್ಳುತ್ತದೆ. ಅರವತ್ತನಾಲ್ಕು ಕಲೆಗಳನ್ನು ಭಾರತೀಯ ಪುರಾತನ ಗ್ರಂಥಗಳು ತಿಳಿಸುತ್ತವೆ. ಇವುಗಳನ್ನು ಸ್ಥೂಲವಾಗಿ ಲಲಿಕಲೆ, ವಿಜ್ಞಾನಕಲೆ, ವಾಣಿಜ್ಯಕಲೆ ಮುಂತಾಗಿ ವಿಂಗಡಿಸಬಹುದು. ಲಲಿತಕಲೆಯು ಸಂಸ್ಕಾರ ಮತ್ತು ಪ್ರತಿಭೆಯ ಮೂಲಕ

ರೂಪುಗೊಳ್ಳುತ್ತದೆ. ಸಂಗೀತ, ನೃತ್ಯ, ಸಾಹಿತ್ಯ, ನಾಟಕ, ಶಿಲ್ಪ, ಚಿತ್ರ ಮುಂತಾದವು ಲಲಿತ ಕಲೆಗಳೆನಿಸುತ್ತವೆ.

ಮಾನವ ತನ್ನ ಬದುಕನ್ನು ನಿರ್ವಹಿಸಲು ಉದ್ಯೋಗವನ್ನು ಅವಲಂಬಿಸುವನು. ಮನೋರಂಜನೆಗಾಗಿ ಕ್ರೀಡೆಗಳನ್ನು ಆಡುವನು. ವ್ಯಕ್ತಿತ್ವನ್ನು ಕಲಾತ್ಮಕವಾಗಿಸಿಕೊಂಡು ಆಧ್ಯಾತ್ಮದತ್ತ ಸಾಗಲು ಲಲಿತಕಲೆಗಳನ್ನು ಮಾಧ್ಯಮವಾಗಿ ಬಳಸಿಕೊಳ್ಳುವನು. ಲಲಿತಕಲೆಯನ್ನು ಸಾದಿಸಿಕೊಂಡಾಗ ಆ ಕಲೆಯು ಅವನ ಚಿತ್ತಕ್ಕೆ ಆನಂದವನ್ನುಂಟು ಮಾಡುವುದಲ್ಲದೆ ಪರಿಪೂರ್ಣತೆಯ ಕಡೆಗೆ ಒಯ್ಯುತ್ತದೆ.

**ಸಂಗೀತ ಕಲೆಯ ಉಗಮ**

ಲಲಿತ ಕಲೆಗಳಲ್ಲಿ ಸಂಗೀತವು ಪ್ರಥಮ ಸ್ಥಾನವನ್ನು ಪಡೆಯುತ್ತದೆ. ನಾದಾನುಸಂಧಾನದಿಂದ ಅಂತರ್ಗತ ಸೌಂದರ್ಯವನ್ನು ಕಿವಿಯ ಮೂಲಕ ಹರಿಸಿ, ಲೌಕಿಕ ಪ್ರಪಂಚದ ಜಂಜಾಟವನ್ನು ಮರೆಸಿ, ಕಲಾವಿದ ಮತ್ತು ಶ್ರೋತೃವಿನ ಹೃದಯವನ್ನು ತಣಿಸುವುದೇ ಸಂಗೀತ. ಗೀತವೆಂದರೆ ಹಾಡು. ಸಂಗೀತವೆಂದರೆ ಒಳ್ಳೆಯ ಹಾಡು. ಕಿವಿಗೆ ಹಿತವನ್ನುಂಟುಮಾಡಿ ಹೃದಯವನ್ನು ಮುಟ್ಟಿ ಮಾನಸಿಕ ಉದ್ರೇಕವನ್ನು ಶಮನಗೊಳಿಸುತ್ತದೆ. ಶಾಂತರಸದಲ್ಲಿ ನೆಲೆಗೊಳಿಸುವುದೇ ಶಾಸ್ತ್ರೀಯ ಸಂಗೀತ.

ಪ್ರಕೃತಿಯು ಸಹಜ ಸುಂದರವೂ, ನಿತ್ಯನೂತನವೂ ಆದುದು. ಪ್ರಕೃತಿಯ ಅನುಕರಣೆಯು ಲಲಿತಕಲೆಗಳಲ್ಲಿರುತ್ತದೆ. ಶಾಸ್ತ್ರದ ಚೌಕಟ್ಟಿಗೆ ಒಳಪಟ್ಟು, ಹೃದಯದ ಭಾವನೆಯನ್ನು ವ್ಯಕ್ತಗೊಳಿಸುವ ಲಲಿತಕಲೆಯೇ ಸಂಗೀತ, ಸಂಗೀತವು ದೈವೀಕಲೆ. ಇದನ್ನು ಗಾಂಧರ್ವ ವಿದ್ಯೆಯೆನ್ನುತ್ತಾರೆ. ಯಾವುದೇ ಕಲೆಯನ್ನು ಅಭಿವ್ಯಕ್ತಿಗೊಳಿಸ–ಬೇಕಾದರೂ ಬಾಹ್ಯ ಮಾಧ್ಯಮದ ಅವಶ್ಯಕತೆಯಿದೆ. ಆದರೆ ಸಂಗೀತದಲ್ಲಿ ನಾದಾನುಸಂದಾನಕ್ಕೆ ಆಂತರಿಕ ಚಿತ್ತಶುದ್ಧಿಯೊಂದೇ ಸಾಕು. ಅಂತೆಯೇ ಯಾವುದೇ ಇತರ ಕಲೆಯ ರಸಾಸ್ವಾದನೆಯಲ್ಲಿ ದೃಶ್ಯ ಅಂದರೆ ನೇತ್ರಗಳ ಪಾತ್ರ ಹಿರಿದಾಗಿರುವುದು ಕಲಾವಿದ ಮತ್ತು ಶ್ರೋತೃ ಇಬ್ಬರೂ ಕೇವಲ ಶ್ರವಣೇಂದ್ರಿಯದ ಮೂಲಕ ರಸಾಸ್ವಾದನೆಯನ್ನು ಮಾಡಬಹುದಾದ ಮಹತ್ವ ಸಂಗೀತಕ್ಕಿದೆ. ಲಲಿತಕಲೆಗಳಲ್ಲಿ ಸಂಗೀತದ ಸ್ಥಾನ ಉನ್ನತವಾದುದು ಹಾಗೂ ಮಹತ್ವಪೂರ್ಣವಾದುದು.

**ಭಾರತೀಯ ಶಾಸ್ತ್ರೀಯ ಸಂಗೀತ**

ಭಾರತೀಯ ಸಂಗೀತವು ವೇದ ಜನಿತವಾದುದು. ಸಾಮವೇದವೇ ಸಂಗೀತದ ಮೂಲ. ಅಲ್ಲದೇ ಶಾಸ್ತ್ರೀಯ ಸಂಗೀತವು ಭಕ್ತಿ ಪ್ರಧಾನವಾದುದು. ತಲ್ಲೀನತೆಯಿಂದ ಪರಮಾತ್ಮನನ್ನು ಗೇಯ ಪ್ರಕಾರಗಳ ಮೂಲಕ ಭಕ್ತಿಯಿಂದ ಆರಾಧಿಸುವಲ್ಲಿ ಸಂಗೀತದ ಪಾತ್ರ ಹಿರಿದು. ಸಿರಿಕಂಠದವರು ಗಾಯನದಿಂದಲೂ ವಾದಕರು ಸಂಗೀತ ವಾದ್ಯಗಳ

ವಾದನದಿಂದಲೂ ನಾದೋಪಾಸನೆಯನ್ನು ಮಾಡುವರು. ಸಂಗೀತದ ಜೀವಾಳವೇ ಸುಸ್ವರ ಮತ್ತು ಸುನಾದ. ಸುಸ್ವರ ಮತ್ತು ಸುನಾದದ ಮೂಲಕ ದೇವರನ್ನು ಅರ್ಚಿಸಿ,ಮೋಕ್ಷ ಮಾರ್ಗವನ್ನು ಹೊಂದುವ ಪ್ರಯತ್ನವು ಹಿಂದಿನಿಂದಲೂ ಆಚರಣೆಗೆ ಬಂದಿದೆ.

ಭಾರತದಲ್ಲಿ ದೇವಾಲಯಗಳೇ ಸಂಗೀತವನ್ನು ಪೋಷಿಸುವ ಹಾಗೂ ಬೆಳೆಸುವ ಕೇಂದ್ರಗಳಾಗಿವೆ. ನಮ್ಮ ದೇಶದಲ್ಲಿ ಧರ್ಮ ಪ್ರಚಾರಕರು. ತತ್ವೋಪದೇಶಿಗಳು, ಸಂಗೀತ ಮಾಧ್ಯಮದ ಮೂಲಕವೇ ಉಪದೇಶಗಳನ್ನು ನೀಡುತ್ತ ಬಂದಿರುವುದು ಸರ್ವಕಲಿಕ ಹಾಗೂ ಸರ್ವವಿಧಿತವಾದ ಅಂಶವಾಗಿದೆ. ಹೀಗೆ ಸಂಗೀತವು ಆಧ್ಯಾತ್ಮಿಕತೆಯ ಒಂದು ಮುಖ್ಯವಾಗಿ ಮುನ್ನಡೆಯುತ್ತಿದೆ.

**ಭಾರತೀಯ ಸಂಗೀತ ಪದ್ಧತಿಗಳು**

ವಿಶ್ವದಲ್ಲಿ ಪ್ರತಿಯೊಂದು ರಾಷ್ಟ್ರವೂ ತನ್ನದೇ ಆದ ಒಂದು ಸಂಗೀತ ಪದ್ಧತಿಯನ್ನು ಬೆಳೆಸಿಕೊಂಡು ಬಂದಿದೆ. ಆದರೆ ಅದು ಶಾಸ್ತ್ರೀಯ ಸಂಗೀತವಲ್ಲದೆ ಇರಬಹುದು. ಇಂದು ಮೂರು ಮುಖ್ಯವಾದ ಶಾಸ್ತ್ರೀಯ ಸಂಗೀತ ಪದ್ಧತಿಗಳು ಮಾತ್ರ ಬಳಕೆಯಲ್ಲಿವೆ. ಅವು ಪಾಶ್ಚಾತ್ಯ ಸಂಗೀತ ಹಾಗೂ ಭಾರತೀಯ ಸಂಗೀತವೆನಿಸುವ ಕರ್ನಾಟಕ ಸಂಗೀತ ಮತ್ತು ಹಿಂದೂಸ್ತಾನಿ ಸಂಗೀತ ಪದ್ಧತಿಗಳು.

ನಮ್ಮ ದೇಶದಲ್ಲಿ ಎರಡು ಪ್ರಮುಖವಾದ ಶಾಸ್ತ್ರೀಯ ಸಂಗೀತ ಪದ್ಧತಿಗಳು ಬಳಕೆಯಲ್ಲಿರುವುದು ಹೆಮ್ಮೆಯ ವಿಷಯ. ಅವು ಕರ್ನಾಟಕ ಸಂಗೀತ ಪದ್ಧತಿ ಮತ್ತು ಹಿಂದೂಸ್ತಾನಿ ಸಂಗೀತಪದ್ಧತಿ. ಇವುಗಳನ್ನು ಕ್ರಮವಾಗಿ ದಕ್ಷಿಣಾತ್ಯ ಪದ್ಧತಿ ಮತ್ತು ಉತ್ತರಾದಿ ಅಥವಾ ಔತ್ತರೇಯ ಪದ್ಧತಿಗಳೆಂದೂ ಕರೆಯುವುದು ವಾಡಿಕೆ.

ಕರ್ನಾಟಕ ಶಾಸ್ತ್ರೀಯ ಸಂಗೀತ ಪದ್ಧತಿಯು ಅಂದಿನಿಂದ ಇಂದಿನವರೆಗೆ ಬಹು ಮುಖವಾಗಿ ಬೆಳೆಯುತ್ತಾ ಬಂದರೂ, ಏಕತೆಯಿಂದ ಕೂಡಿ ಏಕಮುಖವಾಗಿ ತನ್ನ ಪದ್ಧತಿಯನ್ನು ಉಳಿಸಿಕೊಂಡು ಬರುತ್ತಿದೆ.

ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ಪದ್ಧತಿಯಲ್ಲಿ ಹಲವು ಶೈಲಿಗಳು ಘರಾನವೆಂಬ ಹೆಸರಿನಿಂದ ರೂಪುಗೊಂಡಿದ್ದರೂ ಸಹ, ಶಾಸ್ತ್ರೀಯ ಸಂಗೀತದ ಚೌಕಟ್ಟು ಭದ್ರವಾಗಿದೆ ಎನ್ನಬಹುದು.

ಭಾರತೀಯ ಸಂಗೀತದ ಕವಲುಗಳಾದ ಎರಡು ಪದ್ಧತಿಗಳಲ್ಲೂ ಸಾಮ್ಯವು ಕಂಡುಬಂದರೂ, ವ್ಯತ್ಯಾಸಗಳನ್ನೂ ಗುರುತಿಸಬಹುದು. ಇವುಗಳಲ್ಲಿ ಕಂಡುಬರುವ ಸಾಮ್ಯ ಹಾಗೂ ವ್ಯತ್ಯಾಸಗಳನ್ನು ಇಲ್ಲಿ ತಿಳಿಸಲಾಗಿದೆ.

**ಕರ್ನಾಟಕ ಮತ್ತು ಹಿಂದೂಸ್ತಾನಿ ಸಂಗೀತ ಪದ್ಧತಿಗಳಲ್ಲಿರುವ ಸಾಮ್ಯಗಳು**

೧. ಸಂಗೀತಕ್ಕೆ ಸಪ್ತ ಸ್ವರಗಳೇ ಆಧಾರ

೨. ಸ್ವರಗಳ ಬಳಕೆ ಹಾಗೂ ಸಂಕೇತಗಳೂ ಒಂದೇ ಆಗಿವೆ. ಸರಿಗಮಪದನಿ ಎಂದೇ ಬಳಸಲಾಗಿದೆ.

೩. ಮೂರು ಸ್ಥಾಯಿಗಳಾದ ಮಂದ್ರ, ಮಧ್ಯ, ತಾರಗಳು ಎರಡೂ ಪದ್ಧತಿಗಳಲ್ಲಿವೆ.

೪. ತಂಬೂರಿಯು ಶ್ರುತಿವಾದ್ಯವಾಗಿದೆ.

೫. ಸಂಗೀತ ರಚನೆಗಳು, ಮನೋಧರ್ಮ ಸಂಗೀತವು ಎರಡು ಪದ್ಧತಿಗಳಲ್ಲಿ ಬಳಕೆಯಲ್ಲಿದ್ದು, ಸಭಾಗಾನವು ಅಂದರೆ ಸಂಗೀತ ಕಛೇರಿಗಳು ಗಾಯನ ವಾದನಗಳೆರಡರಲ್ಲೂ ನಡೆಯುತ್ತವೆ.

೬. ಪಿಟೀಲು ವಾದ್ಯವು ಪ್ರಧಾನ ವಾದ್ಯವಾಗಿಯೂ, ಪಕ್ಕವಾದ್ಯವಾಗಿಯೂ ಎರಡೂ ಪದ್ಧತಿಗಳಲ್ಲೂ ರೂಢಿಸಿಕೊಳ್ಳಲಾಗುತ್ತಿದೆ.

**ಕರ್ನಾಟಕ ಮತ್ತು ಹಿಂದೂಸ್ತಾನಿ ಸಂಗೀತ ಪದ್ಧತಿಗಳಲ್ಲಿ ಕಂಡುಬರುವ ಮುಖ್ಯ ವ್ಯತ್ಯಾಸಗಳು**

| | **ಕರ್ನಾಟಕ ಸಂಗೀತ ಪದ್ಧತಿ** | | **ಹಿಂದೂಸ್ತಾನಿ ಸಂಗೀತ ಪದ್ಧತಿ** |
|---|---|---|---|
| ೧ | ಈ ಪದ್ಧತಿಯಲ್ಲಿ ಒಂದು ಸ್ಥಾಯಿಯಲ್ಲಿ ಹದಿನಾರು ಸ್ವರಗಳಿವೆ. | ೧ | ಈ ಪದ್ಧತಿಯಲ್ಲಿ ಒಂದು ಸ್ಥಾಯಿಯಲ್ಲಿ ಹನ್ನೆರಡು ಸ್ವರಗಳಿವೆ. |
| ೨ | ರಾಗ ವಿಭಜನೆಯಲ್ಲಿ ಜನಕ ಮತ್ತು ಜನ್ಯ ಪದ್ಧತಿಯನ್ನು ಹೊಂದಿದೆ. | ೨ | ರಾಗ ವಿಭಜನೆಯಲ್ಲಿ ರಾಗ-ರಾಗಿಣಿ ಮತ್ತು ಥಾಟ್ ಪದ್ಧತಿಗಳನ್ನು ಹೊಂದಿದೆ. |
| ೩ | ರಾಗ ಸ್ವರೂಪದಲ್ಲಿ ಸ್ಥೂಲವಾಗಿ ಸಾಮ್ಯತೆಯಿದ್ದರೂ ಹೆಸರುಗಳು ಭಿನ್ನವಾಗಿವೆ.<br>ಉದಾಹರಣೆಗೆ:ಮೋಹನ, ಹಿಂದೋಳ, ಮಾಯಾಮಾಳವಗೌಳ, ಚಕ್ರವಾಕ | ೩ | ರಾಗ ಸ್ವರೂಪದಲ್ಲಿ ಸ್ಥೂಲವಾಗಿ ಸಾಮ್ಯತೆಯಿದ್ದರೂ ಹೆಸರುಗಳು ಭಿನ್ನವಾಗಿವೆ. ಉದಾಹರಣೆಗೆ: ಭೂಪ್ ಮಾಲ್‌ಕೌನ್ಸ್, ಭೈರವ್, ಆಹಿರ್ ಭೈರವ್. |
| ೪ | ತಾಳಗಳಲ್ಲಿ ಸೂಳಾದಿ ಸಪ್ತತಾಳಗಳು ಮತ್ತು ಛಾಪು ತಾಳಗಳು ರೂಢಿಯಲ್ಲಿದೆ. | ೪ | ತಾಳಗಳಲ್ಲಿ ತ್ರಿತಾಲ್, ಚೌತಾಲ್, ಝುಪ್‌ತಾಲ್ ಮುಂತಾದ ತಾಳಗಳು ಬಳಕೆಯಲ್ಲಿವೆ |
| ೫ | ತಾಳಗಳನ್ನು ಕ್ರಿಯೆಯ ಮೂಲಕ ಎಣಿಸಿ ತೋರಿಸಲಾಗುತ್ತದೆ. | ೫ | ತಾಳವನ್ನು ಕ್ರಿಯೆಯ ಮೂಲಕ ತೋರಿಸದೆ ಎಣಿಕೆಯನ್ನು ತಬಲದ ಸಾಥಿಯ ಮೂಲಕ |

| | | | |
|---|---|---|---|
| | | | ನಿರ್ವಹಿಸಲಾಗುತ್ತದೆ. |
| ೬ | ಗೀತ, ಜತಿಸ್ವರ, ಸ್ವರಜತಿ, ವರ್ಣಕೃತಿ, ಕೀರ್ತನೆ, ಪದ, ಜಾವಳಿ, ತಿಲ್ಲಾನ ಮುಂತಾದ ಸಂಗೀತ ರಚನೆಗಳಿವೆ. | ೬ | ದ್ರುಪದ್, ಧಮಾರ್, ತರಾನಖ್ಯಾಲ್, ಟಪ್ಪ, ಠುಮ್ರಿ, ಘಜಲ್, ಭಜನ್ ಮುಂತಾದ ಸಂಗೀತ ರಚನೆಗಳಿವೆ. |
| ೭ | ವೀಣೆ, ಗೋಟುವಾದ್ಯ, ಕೊಳಲು, ನಾಗಸ್ವರ, ಕ್ಲಾರಿನೆಟ್, ಮೃದಂಗ, ಡೋಲು, ಡೋಲಕ್, ಘಟ, ಕಂಜಿರ, ಮೋರ್ಚಿಂಗ್, ಜಲತರಂಗ್ ಮುಂತಾದವು ಸಂಗೀತವಾದ್ಯಗಳು | ೭ | ಸಿತಾರ್ ಬಿನ್, ಸರೋದ್, ದಿಲ್ರೂಬ, ಸಾರಂಗಿ, ಸಂತೂರ್, ಬಾನ್ಸುರಿ, ಷಹನಾಯ್, ತಬಲ, ಪಕವಾಜ್ ಮುಂತಾದವು. |

ಭಾರತದ ಎರಡು ಶಾಸ್ತ್ರೀಯ ಸಂಗೀತ ಪದ್ಧತಿಗಳು ಏಕತೆ ಮತ್ತು ಭಿನ್ನತೆಗಳನ್ನು ಸಾಧಿಸಿಕೊಂಡು. ಜುಗಲ್ ಬಂದಿ ಕಛೇರಿಗಳ ಮೂಲಕ ಇತ್ತೀಚೆಗೆ ಅಧಿಕ ಸಂಖ್ಯೆಯಲ್ಲಿ ರಸಿಕರನ್ನು ಆಕರ್ಷಿಸುತ್ತಿವೆ. ಹೊಂದಾಣಿಕೆಯೊಡನೆ ಕಲೆಗಳ ಪರಸ್ಪರ ವಿನಿಮಯಗಳೂ ಆಗಿಂದಾಗ್ಗೆ ಆಗುತ್ತಿವೆ. ಒಟ್ಟಿನಲ್ಲಿ ಎರಡು ಪದ್ಧತಿಗಳೂ ವಿಶ್ವದಾದ್ಯಂತ ಶ್ರೋತೃಗಳ ಗಮನವನ್ನು ಸೆಳೆಯುತ್ತಿವೆ.

ಹೀಗೆ ಎರಡು ಬಗೆಯ ಸಂಗೀತ ಪದ್ಧತಿಗಳಲ್ಲಿ ಒಂದೊಂದಾದ ಕರ್ನಾಟಕ ಶಾಸ್ತ್ರೀಯ ಸಮಗೀತವನ್ನು ಅಭ್ಯಾಸ ಮಾಡಿ, ಸುಶ್ರಾವ್ಯ ಕಂಠದಿಂದ ಮಧುರವಾಗಿ ಹಾಡುವ ಮಹಿಳೆಯೊಬ್ಬರು ಈ ಗುಬ್ಬಹಳ್ಳಿ ಗ್ರಾಮದಲ್ಲಿ ಕಂಡು ಬರುತ್ತಾರೆ. ಅವರ ಪರಿಚಯವನ್ನು ಇಲ್ಲಿ ಮಾಡಿಕೊಳ್ಳೋಣ.

**ಬಿ.ಪುಟ್ಟಗೌರಮ್ಮ (ಉದ್ದೂರಮ್ಮ)**

ಬಿ.ಪುಟ್ಟಗೌರಮ್ಮನವರು ಹುಟ್ಟಿದ್ದು ಹೊಳೆನರಸೀಪುರ ತಾಲ್ಲೂಕಿನ ಉದ್ದೂರು ಹೊಸಹಳ್ಳಿ ಎಂಬ ಗ್ರಾಮದಲ್ಲಿ. ತಂದೆ ದೊಡ್ಡಅಪ್ಪೇಗೌಡ್ರು ಉರುಪ್ ಚೆನ್ನವೀರಪ್ಪ, ತಾಯಿ ಭದ್ರಮ್ಮ, ಇವರ ಐದು ಜನ ಮಕ್ಕಳಲ್ಲಿ (ಮೂರು ಹೆಣ್ಣುಮಕ್ಕಳು, ಇಬ್ಬರು ಗಂಡುಮಕ್ಕಳು) ಪುಟ್ಟಗೌರಮ್ಮನವರು ಮೂರನೆಯವರು. ಇವರು ಲಿಂಗಾಯಿತ ಜನಾಂಗಕ್ಕೆ ಸೇರಿದವರು.

ಇವರ ವಿದ್ಯಾಭ್ಯಾಸದ ಬಗ್ಗೆ ಹೇಳುವುದಾದರೆ, "ಹೈಸ್ಕೂಲ್‌ನ ಮೊದಲ ವರ್ಷವಾದ ಎಂಟನೇ ತರಗತಿಯವರೆಗೆ ಓದಿದೆ. ಮಾರನೆಯ ವರ್ಷ ಋತುಮತಿಯಾದ್ದರಿಂದ, ಹೆಣ್ಣು ಮಕ್ಕಳು ನೀರ್ ಹಾಕೊಂಡ್ ಮೇಲೆ ಶಾಲೆಗೆ ಹೋಗ್‌ಬಾರ್ದು ಎಂದು ಮನೆಯವರು ಸಂಗೀತ ಹಾಗೂ ಹಾರ್ಮೊನಿಯಂ ಕಲಿಕೆಯ ಪಾಠವನ್ನು ಸುಮಾರು ಎರಡು ವರ್ಷಗಳ ಕಾಲ ಹೇಳಿಸಿದರು" ಎಂದು ಹೇಳುತ್ತಾರೆ. ತಮ್ಮ ಸಂಗೀತ ಕಲಿಕೆಯ ಬಗ್ಗೆ ಪುಟ್ಟಗೌರಮ್ಮನವರು.

ತದನಂತರ ೧೯೫೦ನೇ ಇಸವಿಯಲ್ಲಿ ತಮ್ಮ ೧೭ನೇ ವರ್ಷಕ್ಕೆ ಗುಬ್ಬಹಳ್ಳಿಯ ಪಟೇಲ್ ವೀರಪ್ಪನವರೊಡನೆ ಇವರ ವಿವಾಹವಾಯಿತು. ಇವರಿಗೆ ಇಬ್ಬರು ಮಕ್ಕಳು, ಒಂದು ಹೆಣ್ಣು, ಒಂದು ಗಂಡು.

ಪುಟ್ಟಗೌರಮ್ಮನವರ ಹುಟ್ಟೂರು ಉದ್ದೂರು ಹೊಸಹಳ್ಳಿಯಾದುದರಿಂದ, ಗುಬ್ಬಿಹಳ್ಳಿಯಲ್ಲಿ ಇವರನ್ನು ಎಲ್ಲರೂ 'ಉದ್ದೂರಮ್ಮ' ಎಂದೇ ಕರೆಯುತ್ತಾರೆ. ಈಗ ಸದ್ಯಕ್ಕೆ ಇವರಿಗೆ ಉದ್ದೂರಮ್ಮ ಎಂಬ ಹೆಸರೇ ಪ್ರಚಲಿತದಲ್ಲಿದೆ.

ಉದ್ದೂರಮ್ಮನವರು ಹೀಗೆ ಎರಡು ವರ್ಷಗಳ ಕಾಲ ಕರ್ನಾಟಕ ಶಾಸ್ತ್ರೀಯ ಸಂಗೀತವನ್ನು ಅಭ್ಯಾಸ ಮಾಡಿದ್ದು, ಇವರು ತುಂಬಾ ಚೆನ್ನಾಗಿ ಹಾಡುತ್ತಾರೆ. ಅಲ್ಲದೆ ತಮ್ಮ ಹಾಡುವಿಕೆಯ ಜೊತೆಗೆ ಇಟ್ಟುಕೊಂಡಿರುವ ಹಾರ್ಮೋನಿಯಂ ವಾದನವನ್ನು ತುಂಬ ಚೆನ್ನಾಗಿ ನುಡಿಸುತ್ತಾ ಸುಶ್ರಾವ್ಯ ಕಂಠದಿಂದ ಮಧುರವಾಗಿ ಹಾಡುತ್ತಾರೆ. ಹೀಗೆ ಉದ್ದೂರಮ್ಮನವರು ತುಂಬಾ ಚೆನ್ನಾಗಿ ಹಾಡುವುದರ ಜೊತೆಗೆ ಹಾರ್ಮೋನಿಯಂ ನುಡಿಸುವುದರಲ್ಲೂ ಪರಿಣಿತರು.

ಈಗ ಪ್ರಸ್ತುತದಲ್ಲಿ ಉದ್ದೂರಮ್ಮನವರಿಗೆ ಎಪ್ಪಾತ್ತಾರು ವರ್ಷ ವಯಸ್ಸು. ಸಂಗೀತದ ಜೊತೆಗೆ ಬೇಸರ ಕಳೆಯಲು ತಮ್ಮ ಮನೆಯ ಮುಂದೆಯೇ ಅಂಗಡಿಯೊಂದನ್ನು ಇಟ್ಟುಕೊಂಡು ತಮ್ಮ ವಿಶ್ರಾಂತ ಜೀವನವನ್ನು ಕಳೆಯುತ್ತಿದ್ದಾರೆ.

**ಕೋಲಾಟ**

ಹಬ್ಬ ಅಥವಾ ವಿಶೇಷ ಉತ್ಸವಗಳ ಸಂದರ್ಭಗಳಲ್ಲಿ ಪ್ರದರ್ಶಿಸುವ ಒಂದು ಜನಪದ ಕುಣಿತ. ಇದು ಅಲಾಯಿ ಹೆಜ್ಜೆ ಮತ್ತು ಉತ್ತರ ಕನ್ನಡ ಜಿಲ್ಲೆಯ 'ಗೋತ್ರ' ಹೆಣೆಯುವ ಕಲೆಯನ್ನು ಹೋಲುತ್ತದೆ. ಈ ಕೋಲಾಟದ ಕುಣಿತದಲ್ಲಿ ಇಪ್ಪತ್ತು ಜನರಿರುತ್ತಾರೆ. ಒಬ್ಬೊಬ್ಬರ ಕೈಯಲ್ಲಿ ಎರಡೆರಡು ಕೋಲುಗಳಂತೆ ಒಟ್ಟು ನಲವತ್ತು ಕೋಲುಗಳು ಇರುತ್ತವೆ. ಈ ಕಲಾವಿದರು ಕೋಲಾಟದ ಸಂದರ್ಭದಲ್ಲಿ ನಿಕ್ಕರ್ ಹಾಗೂ ಬನಿಯನ್‌ಗಳನ್ನು ಧರಿಸಿರುತ್ತಾರೆ. ಇವರು ಸಾಮಾನ್ಯವಾಗಿ ಬೇಸಿಗೆ ಕಾಲದಲ್ಲಿ ಕೃಷಿ ಕೆಲಸಗಳಿಲ್ಲದ ಸಂದರ್ಭದಲ್ಲಿ ಸಾಯಂಕಾಲದ ವೇಳೆ ಅಭ್ಯಾಸ ಮಾಡುತ್ತಾರೆ. ಈ ಕೋಲಾಟದಲ್ಲಿ ಗಾಯನ ಹಾಗೂ ತಾಳ ಬಹಳ ಮುಖ್ಯ. ಹಾಡಿನ ತಾಳಕ್ಕೆ ತಕ್ಕಂತೆ ಕೋಲಿನಲ್ಲಿ ಏಟು ಹಾಕುತ್ತಾರೆ. ಈ ಕೋಲಾಟದಲ್ಲಿ ಮುಖ್ಯವಾಗಿ ಕಂಡುಬರುವ ಆಟಗಳೆಂದರೆ ಜಡೆಕೋಲು, ಕಾಲ್‌ಚಿಟ್ಟು, ಮಧ್ಯಾಮಿ, ಕೃಷ್ಣಕೊರವಂಜಿ ಮುಂತಾದ ಆಟಗಳು ಪ್ರಮುಖವಾಗಿವೆ. ಕೋಲಾಟವನ್ನು ಕಲಿಯುವವರಿಗೆ ಹೇಳಿಕೊಡಲು ಒಬ್ಬರು ಇರುತ್ತಾರೆ. ಇವರನ್ನು ಕೋಲಾಟದ ಮೇಷ್ಟ್ರು ಎಂದು ಕರೆಯುತ್ತಾರೆ. ಇವರು

ಗ್ರಾಮಾಂತರ ಪ್ರದೇಶಗಳಲ್ಲಿ ಕಂಡುಬರುತ್ತಾರೆ. ಗುಬ್ಬಹಳ್ಳಿ ಗ್ರಾಮದಲ್ಲಿ ಇಂತಹ ಕೋಲಾಟದ ಮೇಷ್ಟ್ರೊಬ್ಬರಿದ್ದಾರೆ. ಅವರ ಪರಿಚಯವನ್ನು ಇಲ್ಲಿ ಮಾಡಿಕೊಳ್ಳೋಣ.

ಇದೇ ಗುಬ್ಬಹಳ್ಳಿ ಗ್ರಾಮದ ನಾಯಕ ಜನಾಂಗಕ್ಕೆ ಸೇರಿದ ಪಲ್ಲಕ್ಕಿನಾಯಕ ಮತ್ತು ನಿಂಗಮ್ಮ ದಂಪತಿಗಳ ಇಬ್ಬರು ಗಂಡು ಮಕ್ಕಳಲ್ಲಿ ಮೊದಲನೆಯವರು ಜವರನಾಯಕ ಎರಡನೆಯವರು ಕೃಷ್ಣನಾಯಕ. ಈ ಜವರನಾಯಕರೆ ಗುಬ್ಬಹಳ್ಳಿಯ ಕೋಲಾಟದ ಮೇಷ್ಟ್ರು.

"ಜವರನಾಯಕರು ಏಳನೇ ತರಗತಿಯವರೆಗೆ ಓದಿದವರು. ಇವರು ತಮ್ಮ ಇಪ್ಪತ್ತೈದನೆಯ ವಯಸ್ಸಿನಲ್ಲಿ ಚನ್ನರಾಯಪಟ್ಟಣ ತಾಲ್ಲೂಕಿನ ಹುಲಿಕೆರೆ ರಾಜಣ್ಣ ಎಂಬ ಕೋಲಾಟದ ಗುರುಗಳಿಂದ ಕೋಲಾಟವನ್ನು ಕಲಿತುಕೊಂಡು ಕೋಲಾಟದ ಮೇಷ್ಟ್ರಾದರು. ಇವರು ತಮ್ಮ ಸ್ವಗ್ರಾಮವಾದ ಗುಬ್ಬಹಳ್ಳಿ ಹಾಗೂ ಕೆ.ಆರ್.ನಗರ ತಾಲ್ಲೂಕಿನ ಕಂಚಿನಕೆರೆ ಮೊದಲಾದ ಊರುಗಳಲ್ಲಿ ಕೋಲಾಟವನ್ನು ಕಲಿಸಿರುತ್ತಾರೆ."

ಜವರನಾಯಕರ ಕುಟುಂಬದ ಬಗ್ಗೆ ಹೇಳುವುದಾದರೆ, ಜವರನಾಯಕರ ಪತ್ನಿಯ ಹೆಸರು ಪಾರ್ವತಮ್ಮ, ಇವರಿಗೆ ರೇವಣ್ಣ, ರಮೇಶ, ಇಂದ್ರಮ್ಮ, ಗಂಗೆ, ಗೌರಿ ಎಂಬ ಐದು ಜನ ಮಕ್ಕಳಿರುತ್ತಾರೆ. ಜವರನಾಯಕರದು ಕೋಲಾಟದಲ್ಲಿ ಎತ್ತಿದ ಕೈ. ಇವರು ಕೋಲಾಟದ ಮೇಷ್ಟ್ರಾದರೂ ವೃತ್ತಿಯಲ್ಲಿ ಕೃಷಿಕರಾಗಿದ್ದಾರೆ. ಇವರಿಗೆ ಈಗ ಐವತ್ತು ವರ್ಷ ವಯಸ್ಸು. ಇವರು ಗುಬ್ಬಹಳ್ಳಿಯ ಕೋಲಾಟ ಮೇಷ್ಟ್ರಾಗಿ ಹೆಸರುಗಳಿಸಿರುತ್ತಾರೆ.

**ಚಕ್ರವದಿ**

'ಚಕ್ರವದಿ' ಎಂಬುದು ಒಂದು ಬಗೆಯ ಜನಪದ ವಾದ್ಯವಾಗಿದೆ. ಇದು ಸುಮಾರು ಒಂದೂಕಾಲು ಅಡಿ ಸುತ್ತಳತೆಯನ್ನು ಹೊಂದಿದ್ದು ವೃತ್ತಾಕಾರವಾಗಿರುತ್ತದೆ. ಈ ವೃತ್ತಾಕಾರದ ಆಕೃತಿಯನ್ನು ಸುಟ್ಟಮಣ್ಣಿನಿಂದ ತಯಾರಿಸಿರುತ್ತಾರೆ. ಇದಕ್ಕೆ ಆಡು ಅಥವಾ ಮೇಕೆಯ ಚರ್ಮವನ್ನು ವದಿಸಿರುತ್ತಾರೆ. ಈ ವಾದನವನ್ನು ಅವರು ತಮ್ಮ ತಾಳಕ್ಕೆ ತಕ್ಕಂತೆ ಬಾರಿಸುತ್ತಾರೆ. ಇದರಿಂದ ಹೊರಹೊಮ್ಮುವ ನಾದವು ಒಂದು ಬಗೆಯದಾಗಿರುತ್ತದೆ. ಈ ವಾದನಕ್ಕೆ ಚಕ್ರವದಿ ಎಂಬ ಹೆಸರಲ್ಲದೆ ವೃತ್ತಾಕಾರವಾಗಿರುವುದರಿಂದ ಇದಕ್ಕೆ 'ಬಳೆ' ಎಂಬ ಮತ್ತೊಂದು ಹೆಸರಿದೆ.

ಗುಬ್ಬಹಳ್ಳಿ ಗ್ರಾಮದಲ್ಲಿ ಕುರುಬ ಜನಾಂಗಕ್ಕೆ ಸೇರಿದ 'ಉಜಿನಿಲಿಂಗೇಶ್ವರ ಯುವಕರ ಸಂಘ' ಎಂಬ ಒಂದು ಸಂಘವಿದೆ. ಈ ಸಂಘದ ಸದಸ್ಯರು ಈ ವಾದ್ಯವನ್ನು ಬಾರಿಸುತ್ತಾರೆ. ಈ ಸಂಘದಲ್ಲಿ ಹತ್ತು ಜನ ಸದಸ್ಯರಿದ್ದಾರೆ. ಅವರುಗಳೆಂದರೆ, ಬೋಜೇಗೌಡ(೩೫), ಬಸವೇಗೌಡ(೫೦), ಕುಮಾರೇಗೌಡ (೪೦), ರುದ್ರೇಗೌಡ(೩೫), ಶಂಕರೇಗೌಡ(೩೫), ತೀರ್ಥೇಶ (೨೬), ರಾಮ(೨೫), ನಿಂಗೇಗೌಡ (೩೫), ಬಸವೇಗೌಡ (೪೦), ನಾಗರಾಜೇಗೌಡ (೪೦), ಇವರುಗಳು ಈ ಸಂಘದ ಸದಸ್ಯರುಗಳು ಹಾಗೂ ಈ

ಸಂಘದ ಮುಖ್ಯಸ್ಥರು ನಾಗರಾಜೇಗೌಡರು ಮತ್ತು ಸಂಘದ ಅಧ್ಯಕ್ಷರು ಬೋಜೇಗೌಡರು ಆಗಿರುತ್ತಾರೆ.

ಈ ಸಂಘದ ಅಧ್ಯಕ್ಷರಾದ ಬೋಜೇಗೌಡರು, ಹೊಳೇನರಸೀಪುರ ತಾಲ್ಲೂಕಿನ ಕಡವಿನ ಹೊಸಹಳ್ಳಿಯ ಜವರೇಗೌಡರೆಂಬ ಗುರುಗಳಿಂದ ಈ ಚಕ್ರವದಿ ವಾದ್ಯ ನುಡಿಸುವುದನ್ನು ಅದರ ಜೊತೆಜೊತೆಗೆ ದೇವರ ಸ್ತೋತ್ರಗಳನ್ನು ಹೇಳುವುದನ್ನು ಕಲಿತುಕೊಂಡ ಬೋಜೇಗೌಡರು, ತಮ್ಮ ಸಂಘದ ಸದಸ್ಯರುಗಳಿಗೆ ಈ ವಾದನ ಬಾರಿಸುವ ಹಾಗೂ ದೇವರ ಸ್ತೋತ್ರಗಳನ್ನು ಹೇಳುವುದನ್ನು ಸುಮಾರು ನಾಲ್ಕು ವರ್ಷಗಳಿಂದ ಕಲಿಸುತ್ತಿದ್ದು, ಈಗ ಅವರೇ ಗುರುಗಳಾಗಿರುತ್ತಾರೆ.

ಈ ಕಲೆಯನ್ನು ಇಲ್ಲಿನ ದೇವರುಗಳಾದ ಉಜಿನಿಲಿಂಗೇಶ್ವರ ಹಾಗೂ ಈರಣ್ಣ – ದೂತಣ್ಣರ ಉತ್ಸವದ ಸಂದರ್ಭಗಳಲ್ಲಿ ಮಾತ್ರ ಬಳಸುತ್ತಾರೆ. ಈ ಸಂಘದ ಸದಸ್ಯರುಗಳು ತುಂಬ ನೇಮನಿಷ್ಠೆಯಿಂದ ಇದ್ದು, ಮನೆಯನ್ನು ಹೊರತುಪಡಿಸಿ ಹೊರಗಿನ ಯಾವುದೇ ಹೋಟೆಲ್ ಹಾಗೂ ಉಪಹಾರ ಮಂದಿರಗಳಲ್ಲಿ ಕಾಫಿ, ಟೀ, ತಿಂಡಿ ಏನನ್ನು ಸ್ವೀಕರಿಸುವುದಿಲ್ಲ.

ದೇವರ ಉತ್ಸವದ ಸಂದರ್ಭದಲ್ಲಿ ಈ ಚಕ್ರವದಿ ವಾದ್ಯಗಳು ಎರಡಿದ್ದು, ಎರಡನ್ನೂ ಇಬ್ಬರು ಬಾರಿಸುತ್ತಾರೆ. ಉಳಿದವರು ಅದರ ತಾಳಕ್ಕೆ ತಕ್ಕಂತೆ ನರ್ತಿಸುತ್ತಾ, ಕುಣಿಯುತ್ತಾ, ಹೆಜ್ಜೆಹಾಕುತ್ತಾರೆ. ಈ ಸಂದರ್ಭದಲ್ಲಿ ಇವರು ಬಿಳಿಯ ಬಣ್ಣದ ಪಂಚೆ, ಬಿಳಿಯ ಅಂಗಿ, ಬಿಳಿಯ ಟವಲ್ ಧರಿಸಿದ್ದು, ಕಾಲುಗಳಿಗೆ ಗೆಜ್ಜೆಯನ್ನು ಕಟ್ಟಿರುತ್ತಾರೆ. ಈ ಸಂದರ್ಭದಲ್ಲಿ ಗುರುಗಳಾದ ಬೋಜೇಗೌಡರು ''ನೀ ಎಲ್ಲಿಯವನು ಶಿವ? ಎಲ್ಲಿಯವನು? ನನ್ನ ಮುಗುಟದಯ ಎಲ್ಲಿಹ ಎಲ್ಲಿಹನು? ಅಲ್ಲಿಹನು ಎಲ್ಲಿವನು ಸ್ವಾಮಿ ಮೊಗ್ಗಿನಲ್ಲಿ ತಳಗಿಹನು. ಹೇ ಗುರುವೇ ಬಾರ ನರಸೀಪುರದ ಗುರುವೇ ಬಾರ'' ಎಂದು ಗುರುವಿನ ಸ್ತೋತ್ರವನ್ನು ಹೇಳುತ್ತಾ ಪ್ರಾರಂಭಿಸುತ್ತಾರೆ. ನಂತರ ''ಹೇ ಲಿಂಗವೇ ಬಾರಯ್ಯ, ಲಿಂಗವೇ ಬಾ, ಒಳ್ಳೆ ಮುದ್ದು ಮುಖವ ತೊಳೆದು ಲಿಂಗವೇ ಬಾ, ತೊಳೆದು ತಿದ್ದಿದ ಕಸ್ತೂರಿ ಧರಿಸಿದ ಲಿಂಗವೇ ಬಾ ಲಿಂಗವೇ ಬಾ, ಲಿಂಗವೇ ಬಾ, ಒಳ್ಳೆ ಕುರುಬರ ಬೀರಯ್ಯನ ಲಿಂಗವೇ ಬಾ, ನಿನ್ನ ಬೆಡಗು ಯಾವುದು ಸ್ವಾಮಿ? ಲಿಂಗವೇ ಬಾ'' ಮತ್ತೆ ಹೆಣ್ಣು ದೇವರಿಗೆ ''ಒಲಿದು ಬಾರೆ ಒಲಿದು ಬಾರೆ, ಒಲಿದು ಬಾರಮ್ಮ ಒಲಿದು ಬಾರೆ, ಒಳ್ಳೆ ತಾಯಿ ಕರಿಯಮ್ಮ ಒಲಿದು ಬಾರೆ, ನೀನು ಮಳ್ಳಿಮಾವತ್ತೂರಮ್ಮನೆ ಒಲಿದು ಬಾರೆ'' ಎಂದು ಬೋಜೇಗೌಡರು ಸ್ತೋತ್ರ ಹೇಳುವಾಗ ಉಳಿದ ಕೆಲವರು ಅದಕ್ಕೆ ಹಿಮ್ಮೇಳವಾಗಿ ಸೋತ್ರ ಹೇಳುತ್ತಿರುತ್ತಾರೆ.

ಈ ಸಂಘದವರು ಈ ಊರಿನಲ್ಲಿ ಮಾತ್ರವಲ್ಲದೆ, ಬೇರೆ, ಬೇರೆ ಊರುಗಳ ಉತ್ಸವಕ್ಕೂ ಹೋಗುತ್ತಾರೆ. ಉದಾಹರಣೆಗೆ, ಪಕ್ಕದ ಗ್ರಾಮವಾದ ದುದುಕನಹಳ್ಳಿಯ

ಉಡುಚಲಮ್ಮನ ಉತ್ಸವಕ್ಕೆ, ಕೆ.ಆರ್.ನಗರ ತಾಲ್ಲೂಕಿನ ಕುಲುಮೆ ಹೊಸೂರಿನ ಕಿಕ್ಕೇರಮ್ಮನ ಉತ್ಸವಕ್ಕೆ, ಹೊಳೆನರಸೀಪುರ ತಾಲ್ಲೂಕಿನ, ಎಡೆಗೌಡನಹಳ್ಳಿಯ ಕರಿಯಮ್ಮನ ಉತ್ಸವಕ್ಕೆ ಹೀಗೆ ಬೇರೆ ಬೇರೆ ಕಡೆಗಳಿಗೂ ಹೋಗಿಬರುತ್ತಾರೆ. ಹೀಗೆ ಗುಬ್ಬಹಳ್ಳಿಯಲ್ಲಿ ಚಕ್ರವದಿ ಕಲೆಯು ಉಳಿದು, ಬೆಳೆಯುತ್ತಾ ಸಾಗಿದೆ.

**ಭಜನೆ**

ಗುಬ್ಬಹಳ್ಳಿ ಗ್ರಾಮದಲ್ಲಿ 'ಶ್ರೀಗುರುಭಜನಾಮಂಡಲಿ' ಎಂಬ ಒಂದು ಚಿಕ್ಕ ಸಂಘವಿದೆ. ಈ ಸಂಘದ ಸದಸ್ಯರೆಲ್ಲಾ ಮಹಿಳೆಯರೇ ಆಗಿರುತ್ತಾರೆ. ಈ ಭಜನಾ ಸಂಘದಲ್ಲಿ ಮೊದಲು, ಪ್ರಾರಂಭದಲ್ಲಿ ಇಪ್ಪತ್ತೈದು ಜನ ಸದಸ್ಯರಿದ್ದು, ಈಗ ಇಲ್ಲಿಯ ಸದಸ್ಯರ ಸಂಖ್ಯೆ ಕೂಗುತ್ತಾ ಬಂದಿದೆ.

ಈ ಶ್ರೀಗುರುಭಜನಾಮಂಡಲಿಯ ಮುಖ್ಯಸ್ಥರೆಂದರೆ ನಿಂಗಾಜಮ್ಮ(೭೫), ಇವರ ನೇತೃತ್ವದಲ್ಲಿ ಪ್ರತಿ ಗುರುವಾರ ಸಂಜೆ ಆರರಿಂದ ಎಂಟು ಗಂಟೆಯ ವರೆಗೆ ಭಜನೆ ಮಾಡುತ್ತಾರೆ. ಈ ಸಂದರ್ಭದಲ್ಲಿ ಇವರು ತಾಳ ಹಾಗೂ ಏಕನಾದಗಳನ್ನು ಹಾಡಲು ಬಳಸುತ್ತಾರೆ. ಇವರು ಸಾಮಾನ್ಯವಾಗಿ "ಭಜನೆ ಬ್ರಹ್ಮಾನಂದ ಸುಖವೊ, ಸೋಹಂ ಭಜನೆ ನಿತ್ಯಾನಂದಸುಖವೋ" ಎಂದು ಭಜನೆಯ ಮಹತ್ವವನ್ನು ಸಾರುತ್ತಾ ಭಕ್ತಿಯಿಂದ ಹಾಡುತ್ತಾ, ಸ್ತೋತ್ರಿಸುತ್ತಾರೆ. ವಿಶೇಷವಾಗಿ ಅಮಾವಾಸ್ಯೆ, ಹುಣ್ಣಿಮೆಗಳಲ್ಲಿ ಭಜನೆ ಮಾಡುತ್ತಾರೆ. ಇವರು ಭಜನೆ ಮಾಡುವ ಸ್ಥಳವೆಂದರೆ ನಿಂಗಾಜಮ್ಮನವರ ಮನೆ.

ಈ ಭಜನಾ ಮಂಡಳಿಯ ಇತರ ಸದಸ್ಯರುಗಳೆಂದರೆ, ಪಾರ್ವತಮ್ಮ(೭೦), ಅಮ್ಮಣ್ಣಮ್ಮ (೬೮), ಸುಂದರಮ್ಮ (೫೦), ಪುಟ್ಟಗೌರಮ್ಮ (೭೬), ಸಿದ್ಧಲಿಂಗಮ್ಮ (೭೫) ಹೀಗೆ ಸಾಮಾನ್ಯವಾಗಿ ಐವತ್ತು ವರ್ಷ ಮೇಲ್ಪಟ್ಟ ಮಹಿಳೆಯರೇ ಈ ಸಂಘದಲ್ಲಿ ಕಂಡುಬರುತ್ತಾರೆ.

ಹೀಗೆ ಈ ಮೇಲ್ಕಂಡಂತೆ ಗುಬ್ಬಳ್ಳಿಯ ಕಲೆ ಮತ್ತು ಕಲಾವಿದರನ್ನು ಪರಿಚಯಿಸಲಾಗಿದೆ.

## ಅಧ್ಯಾಯ ಆರು

# ಗುಬ್ಬಹಳ್ಳಿಯ ಶೈಕ್ಷಣಿಕ, ಆರ್ಥಿಕ, ಸಾಮಾಜಿಕ ಬದುಕು

**ಶಿಕ್ಷಣ** ಮನುಷ್ಯನನ್ನು ಮನುಷ್ಯನನ್ನಾಗಿ ಮಾಡುವ ಒಂದು ಸಾಧನ. ಅಕ್ಷರ ಜ್ಞಾನ ಸಾಧನಕ್ಕೆ ಅಗತ್ಯವಾದ ಒಂದು ಆಧಾರ. ಯಾವ ಸಮಾಜದಲ್ಲಿ ಅಕ್ಷರಸ್ಥರ ಸಂಖ್ಯೆ ಹೆಚ್ಚಾಗಿರುತ್ತದೆಯೋ, ಆ ಸಮಾಜದಲ್ಲಿ ತಿಳಿವಳಿಕೆ, ಎಚ್ಚರಗಳು ಹೆಚ್ಚಾಗಿರುತ್ತವೆ. ವಿದ್ಯೆ-ಬೆಳಕು, ಜೀವ, ಜ್ಞಾನ, ಬದುಕಿನ ಮೂರು ಮಹಾ ಶತ್ರುಗಳೆಂದರೆ ಅವಿದ್ಯೆ, ಅನಾರೋಗ್ಯ ಮತ್ತು ದಾರಿದ್ರ್ಯ. ಮನುಷ್ಯನ ಎಲ್ಲ ಪ್ರಯತ್ನಗಳೂ ಈ ಮೂರನ್ನೂ ಪರಿಹರಿಸಿಕೊಳ್ಳುವುದರ ಕಡೆಗೇ. ಈ ಮೂರರಲ್ಲಿ ಬಹುಮುಖ್ಯವಾದುದೆಂದರೆ ಅವಿದ್ಯೆ. ಮನುಷ್ಯ ವಿದ್ಯಾವಂತನಾದರೆ ಅವನು ಆರೋಗ್ಯದ ಕಡೆಗೆ ಗಮನಕೊಡಬಲ್ಲ; ದಾರಿದ್ರ್ಯದಿಂದ ಬಿಡುಗಡೆ ಹೊಂದಲು ಪ್ರಯತ್ನಿಸಬಲ್ಲ. ಆದ್ದರಿಂದಲೇ ವಿದ್ಯೆಗೆ ಮಹತ್ವವಿದೆ; ಅಕ್ಷರಸ್ಥ ಸಮಾಜಕ್ಕೆ ಗೌರವವಿದೆ.

ಭಾರತದಂಥ ಬಡರಾಷ್ಟ್ರಗಳಲ್ಲಿ ಜೀವನ ನಡೆಸುವುದೇ ಕಷ್ಟವಾಗಿರುವ ಸಂದರ್ಭದಲ್ಲಿ ಅಕ್ಷರ ಕಲಿಯುವುದು ಅನಾವಶ್ಯಕವೆನಿಸುವ ಶ್ರೀಮಂತಿಕೆಯಾಗುತ್ತದೆ. ಶಾಲೆಗೆ ಹೋಗುವ ಮಕ್ಕಳು ಮನೆಯ ಹಿರಿಯರಿಗೆ ದೈನಂದಿನ ಕೆಲಸಗಳಲ್ಲಿ ನೆರವಾಗಬೇಕಾಗಿದೆ; ದುಡಿದು ತರಬೇಕಾಗಿದೆ. ಅಕ್ಷರ ಅನ್ನ ಕೊಡುವುದಿಲ್ಲ ಎಂಬ ಮೌಢ್ಯ ಜನರನ್ನು ಕಾಡುತ್ತದೆ. ಆದ್ದರಿಂದ ಕಡ್ಡಾಯ ಶಿಕ್ಷಣದ ಕಾನೂನಿದ್ದರೂ ಅದರಿಂದಾಗುವ ಸಾಧನೆ ದೊಡ್ಡದೇನೂ ಅಲ್ಲ.

ನಿರಕ್ಷರತೆ ಎನ್ನುವುದು ರಾಷ್ಟ್ರಜೀವನದ ಆಂತರಿಕ ಶತ್ರು. ಈ ಶತ್ರುವನ್ನು ಓಡಿಸದೆ ರಾಷ್ಟ್ರಜೀವನ ಹಸನಾಗುವುದಿಲ್ಲ. ಗಾಳಿ, ನೀರು, ಬೆಳಕುಗಳಷ್ಟು ಸಹಜವಾಗಿ ವಿದ್ಯೆ ಜನರಿಗೆ ತಲುಪಬೇಕು. ಈ ಉದ್ದೇಶದಿಂದಲೇ ಅಂತರರಾಷ್ಟ್ರೀಯ ಸಾಕ್ಷರತಾ ದಿನವನ್ನು ಗೊತ್ತುಮಾಡಿದೆ. ಈ ದಿನವು ನಮ್ಮನ್ನು ನಮ್ಮ ಕರ್ತವ್ಯಗಳ ಕಡೆಗೆ ಎಚ್ಚರಿಸುತ್ತದೆ. ನಾವು ಸಾಕ್ಷರಿಗಳಾಗಿದ್ದರಷ್ಟೇ ಸಾಲದು. ನಮ್ಮ ನೆರೆಹೊರೆಯವರೆಲ್ಲರೂ ಅಕ್ಷರಸ್ಥರಾಗಬೇಕಾದ ಅಗತ್ಯವನ್ನು ಅದು ನೆನಪಿಗೆ ತರುತ್ತದೆ. ಅನಕ್ಷರಸ್ಥರಿಲ್ಲದ ಜಗತ್ತನ್ನು ನೋಡಲು ನಾವೆಲ್ಲರೂ, ನಮ್ಮ ಕೈಲಾದುದನ್ನು ಮಾಡಬೇಕು. ಅದೇ ಆ ದಿನದ ಚಿಂತೆ, ಚಿಂತನೆ.

**ಶಿಕ್ಷಣಕ್ಷೇತ್ರ:**

ಗುಬ್ಬಹಳ್ಳಿಯನ್ನು ಪ್ರವೇಶಿಸುತ್ತಿದ್ದಂತೆ ನಮಗೆ ಮೊದಲು ಕಾಣುವುದೇ 'ಸರ್ಕಾರಿ ಹಿರಿಯ ಪ್ರಾಥಮಿಕ ಪಾಠಶಾಲೆ'. ಇದು ಊರಿನ ಮುಂಭಾಗದಲ್ಲಿಯೇ ಇದೆ. ಇದು ಈ ಊರಿನ ಏಕೈಕ ಸರ್ಕಾರಿ ಶಾಲೆಯಾಗಿದೆ. ಜೆ.ಎನ್.ಚಂದ್ರೇಗೌಡ ಎಂಬುವರು ಈ ಶಾಲೆಯ ಮುಖ್ಯ ಶಿಕ್ಷಕರಾಗಿದ್ದಾರೆ. ಇಲ್ಲಿ ಉತ್ತಮ ಮಟ್ಟದಲ್ಲಿ ಪಾಠ, ಪ್ರವಚನ ನಡೆಯುತ್ತಿದೆ.

ಸರ್ಕಾರದ ಯೋಜನೆಯಾದ 'ಅಕ್ಷರದಾಸೋಹ'ದ ಫಲವಾಗಿ ಇಲ್ಲಿಯ ಮಕ್ಕಳಿಗೆ ಮಧ್ಯಾಹ್ನದ ಊಟವು ದೊರೆಯುತ್ತಿದೆ. ಇದು ಹಿರಿಯ ಪ್ರಾಥಮಿಕ ಶಾಲೆಯಾದ್ದರಿಂದ ಒಂದರಿಂದ ಏಳನೇ ತರಗತಿಯವರೆಗೆ ಕಲಿಯಬಹುದಾಗಿದೆ.

ಇಲ್ಲಿ ಒಂದರಿಂದ ಏಳನೇ ತರಗತಿಯವರೆಗೆ ಕಲಿತ ಮಕ್ಕಳು ಮುಂದೆ ಹೈಸ್ಕೂಲ್ ವಿದ್ಯಾಭ್ಯಾಸಕ್ಕೆ ಪಕ್ಕದ ಊರುಗಳಾದ ಬೀರವಳ್ಳಿ ಅಥವಾ ಅಕ್ಕಿಹೆಬ್ಬಾಳಿಗೆ ಹೋಗುತ್ತಾರೆ. ಅನೇಕ ವಿದ್ಯಾರ್ಥಿಗಳು ಈ ಶಾಲೆಯಲ್ಲಿ ಜ್ಞಾನವನ್ನು ಪಡೆದುಕೊಂಡಿದ್ದಾರೆ. ಇದು ಸರ್ಕಾರಿ ಶಾಲೆಯಾದುದರಿಂದ ಯಾವುದೇ ರೀತಿಯ ಜಾತಿ, ಧರ್ಮ, ಲಿಂಗ, ತಾರತಮ್ಯವಿರದೆ ಎಲ್ಲರಿಗೂ ಸಮಾನ ಶಿಕ್ಷಣವನ್ನು ನೀಡುತ್ತಿದೆ.

ಈ ಶಾಲೆಯಲ್ಲಿ ಕಲಿತ ಅನೇಕ ವಿದ್ಯಾರ್ಥಿಗಳು ಈಗಾಗಲೇ ಕಾಲೇಜು ಹಾಗೂ ಉನ್ನತಶಿಕ್ಷಣವನ್ನು ಪಡೆದುಕೊಂಡಿರುವುದನ್ನು ಕಾಣಬಹುದಾಗಿದೆ. ಈ ಶಾಲೆಯಲ್ಲಿ ರಾಷ್ಟ್ರೀಯ ಹಬ್ಬಗಳಾದ ಸ್ವಾತಂತ್ರ್ಯ ದಿನಾಚರಣೆ, ಗಾಂಧಿಜಯಂತಿ, ಗಣರಾಜ್ಯೋತ್ಸವ ಮೊದಲಾದ ರಾಷ್ಟ್ರೀಯ ಹಬ್ಬಗಳನ್ನು ಸಂಭ್ರಮದಿಂದ ಆಚರಿಸುತ್ತಾರೆ. ಈ ಸರ್ಕಾರಿ ಶಾಲೆ ಗುಬ್ಬಹಳ್ಳಿಯ ಜನರ ಪಾಲಿಗೆ ಜ್ಞಾನದ ಕೇಂದ್ರವೇ ಆಗಿದೆ. ಒಂದು ಕಾಲದಲ್ಲಿ ಅನಕ್ಷರಸ್ಥರೇ ಹೆಚ್ಚಾಗಿದ್ದ ಈ ಗ್ರಾಮದಲ್ಲಿ ದಿನದಿಂದ ದಿನಕ್ಕೆ ಅಕ್ಷರಸ್ಥರ ಸಂಖ್ಯೆ ಹೆಚ್ಚುತ್ತಿರುವುದು, ಗುಬ್ಬಹಳ್ಳಿ ಗ್ರಾಮದ ಶೈಕ್ಷಣಿಕ ಪ್ರಗತಿಯ ಸಂಕೇತವೇ ಆಗಿದೆ.

**ಆರ್ಥಿಕ ಸ್ಥಿತಿ**

ಗುಬ್ಬಹಳ್ಳಿಯ ಶೈಕ್ಷಣಿಕ ಸ್ಥಿತಿಯನ್ನು ಅರಿತ ನಾವು ಅದರ ಆರ್ಥಿಕ ಸ್ಥಿತಿಯನ್ನು ತಿಳಿಯಬಹುದಾಗಿದೆ. ಗುಬ್ಬಹಳ್ಳಿಯ ಅಕ್ಕಪಕ್ಕದಲ್ಲಿ ದುಡುಕನಹಳ್ಳಿ, ಸಾಕ್ಷಿಬೀಡು, ಬೀರುವಳ್ಳಿ, ಹಂದಿಬೀಕನಹಳ್ಳಿ, ಹಂಗರಮುದ್ಧನಹಳ್ಳಿ, ಗುಳುವಿನ ಅತ್ತಿಗುಪ್ಪೆ, ಕಾವಲುಹೊಸೂರು ಮುಂತಾದವುಗಳಿವೆ. ಈ ಗುಬ್ಬಹಳ್ಳಿ ಗ್ರಾಮದ ಜನರು ತಮ್ಮ ಆರ್ಥಿಕ ಸ್ಥಿತಿಗಾಗಿ ಗೃಹಕೈಗಾರಿಕೆ. ವ್ಯಾಪಾರ, ಕೃಷಿ ಇತ್ಯಾದಿಗಳನ್ನು ಅವಲಂಬಿಸಿಕೊಂಡಿರುತ್ತಾರೆ.

**ಗೃಹಕೈಗಾರಿಕೆಗಳು**

ಗೃಹಕೈಗಾರಿಕೆಗಳು ಭಾರತದ ಹಳ್ಳಿಗಳ ಬೆನ್ನೆಲುಬು ಎಂದೇ ಕರೆಸಿಕೊಂಡಿವೆ. ಅಂತೆಯೇ ಈ ಪ್ರದೇಶದ ಜನರು ಹೆಚ್ಚಾಗಿ ಚಾಪೆ ನೆಯ್ಯುವುದು, ಕೋಳಿಸಾಕಾಣಿಕೆ, ರೇಷ್ಮೆ ಉತ್ಪಾದನೆ, ಹಾಲಿನ ಉತ್ಪಾದನೆ ಇತ್ಯಾದಿ ಗುಡಿಕೈಗಾರಿಕೆಗಳನ್ನು ಅವಲಂಬಿಸಿಕೊಂಡು ಅಭಿವೃದ್ಧಿಯತ್ತ ಸಾಗುತ್ತಿದ್ದಾರೆ. ಗುಬ್ಬಹಳ್ಳಿಯ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಕೆರೆ, ನದಿ, ಕಾಲುವೆಗಳಿದ್ದು, ಈಚಲು ಗಿಡಗಳು ಹಾಗೂ ಚಾಪೆಕಡ್ಡಿಗಳು ಹೆಚ್ಚಿನ ಪ್ರಮಾಣದಲ್ಲಿ ಸಿಗುತ್ತವೆ. ಇದರಿಂದ ಇಲ್ಲಿಯ ಜನರು ಇಂತಹ ಮೂಲಗಳನ್ನು ಉಪಯೋಗಿಸಿಕೊಂಡು ಅಭಿವೃದ್ಧಿಯತ್ತ ಹೆಜ್ಜೆ ಹಾಕುತ್ತಿದ್ದಾರೆ.

## ಕೃಷಿ

ಭಾರತವು ಕೃಷಿ ಪ್ರಧಾನವಾದ ದೇಶವಾಗಿದೆ. ಕೃಷಿಯು ಭಾರತದ ಆರ್ಥಿಕತೆಯ ಬೆನ್ನುಮೂಳೆಯಂತಿದೆ. ಕೃಷಿಯು ಗ್ರಾಮೀಣ ಪ್ರದೇಶಗಳ ಆಧಾರಿತ ಕಸುಬಾಗಿದ್ದು ಭಾರತವು ಹಳ್ಳಿಗಳ ನಾಡಾಗಿದೆ. ದೇಶದ ಒಟ್ಟು ಜನಸಂಖ್ಯೆಯಲ್ಲಿ ಶೇ. ೭೭ರಷ್ಟು ಜನರು ಹಳ್ಳಿಗಳಲ್ಲಿ ವಾಸಿಸುತ್ತಿದ್ದಾರೆ. ಮತ್ತು ಶೇ.೬೯ರಷ್ಟು ಜನರು ತಮ್ಮ ಜೀವನ ನಿರ್ವಹಣೆಗಾಗಿ ನೇರವಾಗಿ ಕೃಷಿಯನ್ನೇ ಅವಲಂಬಿಸಿದ್ದಾರೆ. ಆದ್ದರಿಂದ ಭಾರತವು ಹಳ್ಳಿಗಳಲ್ಲಿ ವಾಸಿಸುತ್ತಿದೆ' ಎಂಬ ಮಾತು ಸುಸಂಬದ್ಧವೇ ಆಗಿದೆ. ಕೃಷಿಯು ಭಾರತದ ಆರ್ಥಿಕತೆಯ ಅತಿ ದೊಡ್ಡ ಹಾಗೂ ಪ್ರಮುಖವಾದ ಕ್ಷೇತ್ರವಾಗಿದೆ.

ಯಾವುದೇ ಆರ್ಥಿಕತೆಯನ್ನು ಮೂರು ವಿಶಾಲ ಗುಂಪುಗಳಾಗಿ ವಿಂಗಡಿಸಬಹುದು. ಅವೆಂದರೆ ಪ್ರಾಥಮಿಕ ವಲಯ, ದ್ವಿತೀಯ ವಲಯ ಮತ್ತು ತೃತೀಯವಲಯ. ಕೃಷಿಯು ಜೀವನಾಧಾರ ಕಸುಬಾಗಿರುವುದರಿಂದ ಅದು ಪ್ರಾಥಮಿಕ ವಲಯವೆಂದು ಪರಿಗಣಿಸಲ್ಪಟ್ಟಿದೆ. ಕೈಗಾರಿಕೆಯ ದ್ವಿತೀಯ ವಲಯವೆಂತಲೂ, ಸಾರಿಗೆ ಸಂಪರ್ಕ, ಹಣಕಾಸು ಮತ್ತು ಬ್ಯಾಂಕಿಂಗ್ ಮತ್ತು ಇತರ ಹಲವಾರು ಸೇವೆಗಳು ತೃತೀಯ ವಲಯವೆಂತಲೂ ಪರಿಗಣಿಸಲ್ಪಟ್ಟಿವೆ. ಮಾನವನ ಜೀವನ ನಿರ್ವಹಣೆಗೆ ಅತ್ಯಗತ್ಯವಾದ ಆಹಾರವನ್ನು ಒದಗಿಸುವ ಮೂಲವಾಗಿರುವುದರಿಂದ ಕೃಷಿಯು ಮೂಲಾಧಾರ ಕಸುಬೆಂದು ಬಗೆಯಲ್ಪಟ್ಟಿದೆ. ಯಾವುದೇ ದೇಶವಾದರೂ ಕೃಷಿಯ ಅಭಿವೃದ್ಧಿಯ ಮೂಲಕವೇ ಇತರ ವಲಯಗಳ ಅಭಿವೃದ್ಧಿಗೆ ಮಾರ್ಗವನ್ನು ಕಲ್ಪಿಸಿಕೊಳ್ಳಬೇಕಾಗುತ್ತದೆ. ಇಂದು ಅಭಿವೃದ್ಧಿಹೊಂದಿರುವ ದೇಶಗಳೆಲ್ಲವೂ ಒಂದು ಕಾಲದಲ್ಲಿ ಕೃಷಿ ಪ್ರಧಾನ ಆರ್ಥಿಕತೆಗಳೇ ಆಗಿದ್ದವು. ಕೃಷಿ ವಲಯದ ಅಭಿವೃದ್ಧಿಯ ಭದ್ರ ತಳಪಾಯದ ಮೇಲೇಯೇ. ಕೈಗಾರಿಕೆ, ಸಾರಿಗೆ–ಸಂಪರ್ಕ ಮತ್ತು ಇತರ ವಲಯಗಳನ್ನು ಅಭಿವೃದ್ಧಿಪಡಿಸಬೇಕಾಗುತ್ತದೆ. ಪ್ರಾರಂಭದಲ್ಲಿ ಕೃಷಿಯ ಪ್ರಗತಿಯನ್ನು ನಿರ್ಲಕ್ಷಿಸಿದರೆ ಆರ್ಥಿಕಾಭಿವೃದ್ಧಿಗೆ ನೆಲೆಯೇ ಇರುವುದಿಲ್ಲ. ದಿಕ್ಕೆ ತೋರುವುದಿಲ್ಲ.

ಕೃಷಿ ಪ್ರಧಾನ ಆರ್ಥಿಕತೆಗಳನ್ನು ಹಿಂದುಳಿದ ದೇಶಗಳೆಂತಲೂ, ಕೈಗಾರಿಕಾಭಿವೃದ್ಧಿ ಸಾಧಿಸಿದ ಆರ್ಥಿಕತೆಗಳನ್ನು ಮುಂದುವರಿದ ದೇಶಗಳೆಂತಲೂ ಕರೆಯುವುದು ಆರ್ಥಿಕ ಸಾಹಿತ್ಯದಲ್ಲಿ ರೂಢಿಯಾಗಿದೆ. ಕೃಷಿ ಪ್ರಾಬಲ್ಯ ದೇಶವಾಗಿರುವ ಭಾರತವು ಈ ತಾತ್ವಿಕ ವಿಂಗಡಣೆಗೆ ಹೊರತಾಗಿಲ್ಲ. ಭಾರತವು ಅಭಿವೃದ್ಧಿ ಹೊಂದುತ್ತಿರುವ ದೇಶವಾಗಿದ್ದು ಹಿಂದುಳಿದ ದೇಶಗಳ ಸಾಲಿಗೆ ಸೇರಿದೆ. ಕಳೆದ ನಾಲ್ಕು ದಶಕಗಳ ಅವಧಿಯಲ್ಲಿ ಕೈಗಾರಿಕೀಕರಣಕ್ಕಾಗಿ ನಡೆಸಿದ ಹಲವಾರು ಪ್ರಯತ್ನಗಳ ನಡುವೆಯೂ ಭಾರತವು ಇಂದು

ಕೃಷಿ ಪ್ರಧಾನ ದೇಶವಾಗಿಯೇ ಉಳಿದಿದೆ. ಭಾರತದ ಆರ್ಥಿಕತೆಯಲ್ಲಿ ಕೃಷಿ ಬಹಳ ಮಹತ್ತರವಾದ ಪಾತ್ರವನ್ನು ವಹಿಸುತ್ತದೆ.

ಗುಬ್ಬಹಳ್ಳಿಯ ಸುತ್ತಮುತ್ತ ಒಮ್ಮೆ ವೀಕ್ಷಿಸಿದರೆ, ಹಸಿರು ಪೈರು ಪಚ್ಚೆಗಳಿಂದ ಕಂಗೊಳಿಸುತ್ತದೆ. ಈ ಪ್ರದೇಶದಲ್ಲಿ ಅತಿ ಹೆಚ್ಚಾಗಿ ಕಬ್ಬು, ಅಡಿಕೆ, ತೆಂಗು, ಬಾಳೆ, ಮಾವು ಇತ್ಯಾದಿ ಆರ್ಥಿಕ ಬೆಳೆಗಳನ್ನು ಬೆಳೆಯುತ್ತಾರೆ. ರೈತರು ಹಾಗೂ ಗ್ರಾಮೀಣ ಮಹಿಳೆಯರು ಮಣ್ಣಿನ ಮಕ್ಕಳಾಗಿದ್ದು ಪ್ರತಿಸಮಯದಲ್ಲೂ ಜಮೀನಿನಲ್ಲೇ ನೆಲೆಗೊಂಡಿರುತ್ತಾರೆ. ಅಂತೆಯೇ ಈ ಪ್ರದೇಶದ ರೈತರು ಕೃಷಿ ಭೂಮಿಯನ್ನೇ ಆಗಾಧವಾಗಿ ಪ್ರೀತಿಸುತ್ತಾ ಕಾಲ ಕಳೆಯುತ್ತಾರೆ.

ಆಹಾರದ ಬೆಳೆಗಳಲ್ಲಿ ಪ್ರಧಾನವಾಗಿ ಭತ್ತ, ರಾಗಿಬೆಳೆಗಳನ್ನು ಬೆಳೆಯುತ್ತಾರೆ. ತರಕಾರಿ ಬೆಳೆಗಳಲ್ಲಿ ಕಲ್ಲಂಗಡಿ, ಸೌತೆಕಾಯಿ, ಮೆಣಸಿನಕಾಯಿ, ಕುಂಬಳಕಾಯಿ ಇತ್ಯಾದಿ ಬೆಳೆಗಳನ್ನು ಬೆಳೆಯಲಾಗುತ್ತದೆ. ಇತ್ತೀಚಿನ ದಿನಗಳಲ್ಲಿ ಆರ್ಥಿಕತೆಯ ದೃಷ್ಟಿಯಿಂದ ಹೊಗೆಸೊಪ್ಪಿನ ಬೆಳೆಯನ್ನು ಬೆಳೆಯಲಾಗುತ್ತಿದೆ. ಭತ್ತವನ್ನು ವರ್ಷದಲ್ಲಿ ಎರಡು ಬೆಳೆಯಾಗಿ ಬೆಳೆಯುತ್ತಾರೆ. ಏನುಪಸಲು, ಕಾರ್ಪಸಲು, ಎಂದು ವಿಂಗಡಿಸಿಕೊಂಡಿದ್ದು, ಕಾರ್ಪಸಲು ಎಂದು ಮಳೆಗಾಲದ ಬೆಳೆಯನ್ನು, ಏನುಫಸಲನ್ನು ಬೇಸಿಗೆ ಕಾಲದ ಬೆಳೆಯೆಂದು ಕರೆಯುತ್ತಾರೆ. ರಾಗಿಯನ್ನು ಈ ಪ್ರದೇಶದಲ್ಲಿ ವಿಶೇಷವಾಗಿ ಬೆಳೆಯಲಾಗುತ್ತದೆ. ಜೊತೆಗೆ ಕೊಳವೆಬಾವಿಗಳು, ನಾಲೆಗಳೂ ಸಹ ಬೆಳೆಗಳನ್ನು ಬೆಳೆಯಲು ಸಹಕಾರಿಯಾಗಿವೆ. ತೋಟಗಾರಿಕೆ ಬೆಳೆಗಳಲ್ಲಿ ಮಿಶ್ರ ಬೆಳೆಗಳನ್ನು ಬೆಳೆಯುತ್ತಾರೆ. ಉದಾಹರಣೆಗೆ: ತೆಂಗು, ಬಾಳೆ, ಅಡಿಕೆ, ಶುಂಠಿ ಇತ್ಯಾದಿ ಮಿಶ್ರಬೆಳೆಗಳನ್ನು ಬೆಳೆಯಲಾಗುತ್ತಿದೆ.

**ಸಾಮಾಜಿಕ ಬದುಕು**

ಸಮಾಜವೆಂದರೆ ವ್ಯಕ್ತಿಗಳು ಒಂದಾಗಿ ಹಲವಾರು ಸಂಬಂಧಿಕ ಸೂತ್ರಗಳ ಸಂಕೀರ್ಣಕ್ಕೆ ಒಳಗಾಗಿ ಕೂಡಿಬಾಳುವುದು. ಹೀಗೆ ಬಾಳಲು ಸಮಾಜದಲ್ಲಿ ಸೂಕ್ತ ನಿಯಮಗಳು, ರೀತಿಗಳು ಮತ್ತು ಕ್ರಿಯೆಗಳಿರುತ್ತವೆ. ಯಾವುದೇ ಒಂದು ಸಮಾಜವು ಸಕ್ರೀಯ ವ್ಯಕ್ತಿಗಳಿಂದ ಕೂಡಿದ್ದಾಗಿರುತ್ತದೆ. ಇಲ್ಲಿಯ ವ್ಯಕ್ತಿಗಳು ಒಂದೇ ರೀತಿಯ ಹಿನ್ನೆಲೆ, ಚರಿತ್ರೆ, ಉದ್ದೇಶ, ಶಾರೀರಿಕ ಮತ್ತು ಸಾಮಾನ್ಯವಾಗಿ ಒಂದೇ ರೀತಿಯ ಪರಿಸರಗಳನ್ನು ಹೊಂದಿರುತ್ತಾರೆ. ಸಮಾಜವೆಂದರೆ ಸಾಮಾಜಿಕ ಸಂಬಂಧಗಳನ್ನು, ಹೊಂದಾಣಿಕೆಗಳನ್ನು ಹೊಂದಿರುವಂತಹ ವ್ಯಕ್ತಿಗಳ ಒಂದು ಗುಂಪು. ಆದರೆ ಮರಗಳ ಅಥವಾ ಬಂಡೆಗಳ ಗುಂಪುಗಳು ಸಮಾಜವಾಗಲಾರವು. ಅದೂ ಅಲ್ಲದೆ ಜೀವಿಗಳಾದ ಮರಗಳು ಮತ್ತು ಮೃಗಗಳು ಮಾನವ ಸಾಮಾಜಿಕ ರೀತಿಯ ಜೀವನವನ್ನು ನಡೆಸಲಾರವು. ಮರಗಳು ಜೀವಿಗಳಾದರೂ ಅವುಗಳಿಗೆ ಪರಸ್ಪರ ಅರಿವಿರುವುದಿಲ್ಲ. ಅಂದರೆ, ತಮ್ಮ ಪಕ್ಕದಲ್ಲಿ

ಇನ್ನೊಂದು ಮರವಿದೆ. ಇದು ತನ್ನ ಪಕ್ಕದು, ಇದರೊಡನೆ ಸಾಮಾಜಿಕವಾದ ಸಂಬಂಧವನ್ನಿಟ್ಟುಕೊಳ್ಳಬೇಕು ಎನ್ನುವುದು ಅದಕ್ಕೆ ಶಕ್ಯವಿಲ್ಲ. ಅಂದರೆ, ತಮ್ಮ ಪಕ್ಕದಲ್ಲಿ ಇನ್ನೊಂದು ಮರವಿದ್ದರೂ ಅವುಗಳ ಅರಿವಿಗೆಬಾರದು. ಪ್ರಾಣಿ–ಪಕ್ಷಿಗಳು ಗುಂಪುಗುಂಪಾಗಿ, ಒಂದು ಬಗೆಯ ಸಾಮಾಜಿಕ ನಿಯಮಗಳ ಅವಶ್ಯಕತೆಗಳಿಗಿಂತ ಜೈವಿಕ ಅವಶ್ಯಕತೆಗಳು ಮತ್ತು ಸಹಜ ಪ್ರೇರಣೆ ಅಥವಾ ಮೂಲಪ್ರವೃತ್ತಿಯಿಂದಾಗಿ ಒಂದಾಗುವಂತೆ ಮಾಡುತ್ತವೆ. ಕೆಲವು ಕ್ರಿಮಿಕೀಟಗಳು, ಮೃಗಗಳು ಅತ್ಯಂತ ಹೆಚ್ಚಿನ ಗುಂಪುಗಾರಿಕೆ ಮತ್ತು ಸಹಜೀವನವನ್ನು ಹೊಂದಿದ್ದು ಇದನ್ನು ಸಾಮಾಜಿಕ ಜೀವನವೆನ್ನಲು ಬರುವುದಿಲ್ಲ. ಉದಾಹರಣೆಗೆ: ಜೇನುನೊಣಗಳು ಅತ್ಯಂತ ಹೆಚ್ಚಿನ ಸಹ ಜೀವನವನ್ನು ಹೊಂದಿರುತ್ತವೆ. ಕೆಲವು ಪಕ್ಷಿಗಳು, ಸಿಂಹ, ಕಪಿ ಮುಂತಾದ ಪ್ರಾಣಿಗಳೂ ಒಂದು ಗಂಡು ಒಂದು ಹೆಣ್ಣಿಗೆ ಹೊಂದಿಕೊಂಡು ಕುಟುಂಬದ ರೀತಿಯ ಗುಂಪನ್ನು ಮಾಡಿಕೊಂಡು ತಮ್ಮ ಸಂಗಾತಿಗಳೊಡನೆ, ಮರಿಗಳೊಡನೆ ಜೀವಿಸುತ್ತವೆ. ಇದನ್ನು ಪ್ರಾಣಿಗಳ ಗುಂಪು, ಪ್ರಾಣಿಗಳ ಸಹ ಸಂಸಾರ ಜೀವನವೆನ್ನಬಹುದೇ ವಿನಾ ಅತ್ಯಂತ ಹೆಚ್ಚಿನ ಸಾಮಾಜಿಕ ಗುಣಗಳನ್ನುಳ್ಳಂತಹ ಮಾನವ ಸಂಸಾರಕ್ಕೆ ಹೋಲಿಸಲಾಗದು.

ಮಾನವ ಮತ್ತು ಸಹಜೀವನ ನಡೆಸುತ್ತಿರುವ ಇತರ ಪ್ರಾಣಿಗಳಿಗೆ ಇರುವ ವ್ಯತ್ಯಾಸವೆಂದರೆ ಸಂಸ್ಕೃತಿ, ಮಾನವನ ಸಂಸ್ಕೃತಿ ಅವನ ಸಮಾಜದ ಹುಟ್ಟಿನಿಂದಲೇ ಪ್ರಾರಂಭವಾಯಿತೆನ್ನುವುದನ್ನು ತಿಳಿದಿದ್ದೇವೆ. ಈ ಮಾನವ ಸಂಸ್ಕೃತಿಯು ಮಾನವನ ಸೃಷ್ಟಿಯಾದರೂ ಅದು ಮಾನವನ ಮೇಲೆ ಹೆಚ್ಚಿನ ಪರಿಣಾಮವನ್ನು ಬೀರುತ್ತದೆ. ಅವನ ಕುಟುಂಬ ಜೀವನ, ಕಳ್ಳುಬಳ್ಳಿ, ಸಂಘ–ಸಂಸ್ಥೆಗಳು, ಸಮುದಾಯ ಜೀವನ ಇವೆಲ್ಲವೂ ಸಂಸ್ಕೃತಿಯಿಂದ ನಿರ್ಣಯಿಸಲ್ಪಟ್ಟಂತಹ ವಿಷಯಗಳು, ಇವುಗಳ ಸಂಘಟನೆ ರಚನೆ, ಇರುವಿಕೆ, ಕಾರ್ಯನಿರ್ವಹಣೆ ಮುಂತಾದವು ಆ ಸಮಾಜದ ಸಂಸ್ಕೃತಿಯಿಂದ ಪ್ರಭಾವಿತವಾದವು.

ಗುಬ್ಬಹಳ್ಳಿ ಗ್ರಾಮದಲ್ಲಿ ಆಗಾಗ ಸಾಂಸ್ಕೃತಿಕವಾಗಿ ಜನಪದ ಕಾರ್ಯಗಳು ನಡೆಯುತ್ತವೆ. ಹಬ್ಬ–ಹರಿದಿನ, ಮಹೋತ್ಸವಗಳನ್ನು ಜನರು ಬಿಡುವಿನ ಸಂದರ್ಭಗಳಲ್ಲಿ ಆಚರಿಸುತ್ತಾರೆ. ಯುಗಾದಿ, ಸಂಕ್ರಾಂತಿ, ಕಾರಹಬ್ಬ, ದೀಪಾವಳಿ, ಶಿವರಾತ್ರಿ ಇನ್ನು ಗ್ರಾಮದೇವತೆಯಾದ ದೇವೀರಮ್ಮನಹಬ್ಬ, ಮಾರಿಹಬ್ಬ, ಬಸವೇಶ್ವರನ ಉತ್ಸವ, ಉಜಿನಿಲಿಂಗೇಶ್ವರ, ಈರಣದೂತಣ್ಣರ ಉತ್ಸಾಹ ಇತ್ಯಾದಿ ಹಬ್ಬ, ಉತ್ಸವಗಳು ಹಾಗೂ ನಾಟಕಗಳು, ಕೋಲಾಟ ಹೀಗೆ ಹಲವಾರು ಸಂಸ್ಕೃತಿಗಳನ್ನು ರೂಪಿಸಿಕೊಂಡಿದ್ದಾರೆ.

ಮಕ್ಕಳ ಸಾಂಸ್ಕೃತಿಕ ಆಟಗಳಲ್ಲಿ ಗೋಲಿಯಾಟ, ಗಾಳಿಪಟ ಹಾರಿಸುವುದು, ಕುಂಟಪಿಲ್ಲೆ, ಚಿನ್ನಿದಾಂಡು, ಲಗೋರಿಯಾಟ, ಮರಕೋತಿಯಾಟ, ಹಿಡಿಯಾಟ,

ಕಣ್ಣಾಮುಚ್ಚಾಲೆಯಾಟ, ಬುಗುರಿಯಾಟ, ತೂಗೂಯ್ಯಾಲೆಯಾಟ ಇತ್ಯಾದಿ ಮಕ್ಕಳ ಸಾಂಸ್ಕೃತಿ ಮನೋರಂಜನಾಕ್ರಿಯೆಗಳು ನಡೆಯುತ್ತವೆ.

ಉಡುಗೆ–ತೊಡುಗೆಗಳನ್ನು ಆಧುನಿಕ ರೀತಿಯಲ್ಲಿ ಧರಿಸುವುದನ್ನು ಕಾಣಬಹುದಾಗಿದೆ. ಸ್ತ್ರೀಯರು ವಯೋಮಾನಕ್ಕೆ ತಕ್ಕಂತೆ ತಮ್ಮ ಉಡುಪುಗಳನ್ನು ಧರಿಸುತ್ತಾರೆ. ಹಿರಿಯ ಹೆಂಗಸರು ಸೀರೆಯನ್ನು ಹಾಕಿಕೊಂಡರೆ, ಹುಡುಗಿಯರು ಆಧುನಿಕ ರೀತಿಯಲ್ಲಿ ಡ್ರಸ್ಸು, ಮಿಡ್ಡಿ, ನೈಟಿ ಇತ್ಯಾದಿಗಳನ್ನು ಬಳಸುತ್ತಾರೆ. ಪುರುಷರು ರೈತಾಪಿ ವರ್ಗದವರಾಗಿದ್ದು ಚಡ್ಡಿ, ಅಂಗಿಗಳನ್ನು, ತರುಣ ಯುವಕರು ಪ್ಯಾಂಟ್, ಟೀಶರ್ಟ್‌ಗಳನ್ನು ತೊಟ್ಟುಕೊಳ್ಳುತ್ತಾರೆ.

ಸಾಮಾಜಿಕ ಸಂಬಂಧಗಳನ್ನು ಬೆಸೆಯುವಂತಹ ವಿವಾಹ ಪದ್ಧತಿಯು ಹಿಂದಿನ ರೀತಿಯಂತೆಯೇ ಒಳಜಾತಿ ವಿವಾಹಗಳು ನಡೆಯುತ್ತವೆ. ಈ ವಿವಾಹಗಳು ಅವರವರ ಆರ್ಥಿಕತೆಗೆ ಅನುಗುಣವಾಗಿ ಕೆಲವರು ಹೊರಗಿನ ಛತ್ರಗಳಲ್ಲಿ ಮಾಡಿದರೆ ಮತ್ತೆ ಕೆಲವರು ಮನೆಯ ಮುಂದೆಯೇ ಮದುವೆ ಮಾಡುತ್ತಾರೆ. ಗಂಡನೆ ಹೆಣ್ಣಿನ ಕೊರಳಿಗೆ ಮಾಂಗಲ್ಯಧಾರಣೆಯನ್ನು ಮಾಡುತ್ತಾನೆ. ಮದುವೆಯಾದ ಮೂರು ಅಥವಾ ಐದು ದಿನಗಳ ಒಳಗೆ 'ಕರ್ನಾರೆ (ಬೀಗರಔತಣ)' ನಡೆಯುತ್ತದೆ. ಹೀಗೆ ವಿವಾಹ ಕ್ರಿಯೆಗಳು ನಡೆದು ವಧು–ವರರು ಹೊಸಬಾಳನ್ನು ಕಟ್ಟಲು ಸಿದ್ಧರಾಗುತ್ತಾರೆ.

ಮರಣ ಜಗತ್ತಿನ ಪ್ರತಿಯೊಂದು ಜೀವಿ ಸಂಕುಲಕ್ಕೂ ಸಹ ಅನ್ವಯಿಸುತ್ತದೆ. ಆದರೆ ಈ ಮರಣವನ್ನು ಯಾವ ಜೀವಸಂಕುಲ ಹೇಗೇಗೆ ಆಚರಿಸುತ್ತದೆ ಎಂಬುದೇ ಮರಣದ ವಿಧಿವಿಧಾನವಾಗಿದ್ದು "ಗುಬ್ಬಹಳ್ಳಿಗ್ರಾಮ ಹಾಗೂ ಆಸುಪಾಸಿನ ಪ್ರದೇಶದಲ್ಲಿ ಸತ್ತಂತಹ ಜನರು ನೇರವಾಗಿ ಸ್ವರ್ಗಕ್ಕೆ ಹೋಗುತ್ತಾರೆ ಎಂಬ ನಂಬಿಕೆ ಇದೆ. ಆ ಪ್ರದೇಶದಲ್ಲಿ ಯಾವ ವ್ಯಕ್ತಿಯಾದರೂ ಸತ್ತರೆ ಆ ಶರೀರವನ್ನು ಸಂಬಂಧಪಟ್ಟವರು ಅವರವರ ಜಮೀನಿನಲ್ಲಿ ಊಳಿಬಿಡುತ್ತಾರೆ ಅಥವಾ ಕೆಲವರನ್ನು ಸುಡುತ್ತಾರೆ." ಹೀಗೆ ಈ ಗ್ರಾಮದಲ್ಲಿ ಸತ್ತವರನ್ನು ಊಳುವ ಅಥವಾ ಸುಡುವ ಪ್ರಕ್ರಿಯೆಗಳು ವಾಡಿಕೆಯಲ್ಲಿವೆ.

ಒಟ್ಟಾರೆಯಾಗಿ 'ಗುಬ್ಬಹಳ್ಳಿ ಒಂದು ಅಧ್ಯಯನ'ವು ಒಂದು ನಿಬಂಧವಾಗಿ ರೂಪುಗೊಂಡಿದ್ದು ಅಲ್ಲಿರುವಂತಹ ಭೌಗೋಳಿಕ, ಚಾರಿತ್ರಿಕ ಹಿನ್ನೆಲೆ. ಗುಬ್ಬಹಳ್ಳಿಯ ದೇವಾಲಯಗಳು, ಉತ್ಸವ, ಹಬ್ಬಗಳು ವಿಶೇಷ ನಂಬಿಕೆಗಳು, ಸಂಪ್ರದಾಯಗಳು, ಕಲೆ, ಕಲಾವಿದರು, ಶೈಕ್ಷಣಿಕ, ಆರ್ಥಿಕ, ಸಾಮಾಜಿಕ ಇತ್ಯಾದಿ ಅಂಶಗಳನ್ನು ಈ ನಿಬಂಧ ಒಳಗೊಂಡಿದೆ.

# ಉಪಸಂಹಾರ

ಯಂತ್ರ ನಾಗರಿಕತೆಯ ಪ್ರಭಾವದಿಂದಾಗಿ ಇಂದು ಸಾಂಸ್ಕೃತಿಕ ಹಿಂಬೀಳುವಿಕೆಯೂ ಆರಂಭವಾಗಿದೆ. ಇಂಥ ಪ್ರಭಾವಿ ಹೊಡೆತಕ್ಕೆ ಸಿಕ್ಕಿರುವ ಹಳ್ಳಿಗಳಲ್ಲಿ ಗುಬ್ಬಹಳ್ಳಿಯೂ ಒಂದು. 'ಹಳ್ಳಿ ಹಾಳಾಯ್ತು, ದಿಲ್ಲಿ ಪಟ್ಟಣವಾಯ್ತು' ಎಂಬ ನಾಣ್ಣುಡಿಯಂತೆ ಆಧುನಿಕ ಶಿಕ್ಷಣ, ಸಾರಿಗೆ ವ್ಯವಸ್ಥೆ, ಮನೋರಂಜನಾ ಸಾಧನಗಳು ಪಟ್ಟಣಗಳ ಮತ್ತು ಅಲ್ಲಿಯ ಜನರ ಪ್ರಭಾವಗಳಿಂದಾಗಿ ಹಳ್ಳಿಯೂ ಸಹ ಪಟ್ಟಣಗಳತ್ತ ಸಾಗಿವೆ. ಒಂದು ರೀತಿಯಲ್ಲಿ ಇಂದು ನಮ್ಮ ಹಳ್ಳಿಗರು ನಾಗರಿಕತೆಯ ಕಡೆ ಸಾಗುತ್ತಿದ್ದಾರೆಂಬ ಸಂತೋಷವನ್ನು ಉಂಟುಮಾಡುತ್ತಿದೆ. ಆದರೂ ಆಧುನಿಕತೆಯಿಂದಾಗಿ ಹಳ್ಳಿಗಳ ಕೆಲವು ಸಂಸ್ಕೃತಿ, ಅವರ ಆಚಾರ-ವಿಚಾರ, ಸಂಪ್ರದಾಯ, ನಂಬಿಕೆ ಮುಂತಾದವುಗಳು ಮೂಲರೂಪವನ್ನು ಕಳೆದುಕೊಳ್ಳುತ್ತಿರುವುದು ವಿಷಾದನೀಯವಾದರೂ ವಾಸ್ತವ ಸಂಗತಿಯಾಗಿದೆ.

ಈ ಗುಬ್ಬಹಳ್ಳಿಯ ಸುತ್ತಮುತ್ತಲಿನ ಕೆಲವೊಂದು ಗ್ರಾಮಗಳಿಗೆ ಹೋಲಿಸಿ ನೋಡಿದರೆ ಕೆಲವು ಸಾಂಸ್ಕೃತಿಕ ಆಚರಣೆಗಳಲ್ಲಿ ಹಬ್ಬ, ಉತ್ಸವ ಮೊದಲಾದವುಗಳನ್ನು ಉಳಿಸಿಕೊಂಡು ಬಂದಿರುವುದು ಈ ಅಧ್ಯಯನದ ಮೂಲಕ ತಿಳಿದು ಬರುತ್ತದೆ. ಈ ಕೆಲವಾರು ವರ್ಷಗಳ ಹಿಂದೆ ಬೆಳಗಿನ ಜಾವದಲ್ಲಿ ಎದ್ದು ಹೆಂಗಸರು ಭತ್ತ ಕುಟ್ಟುತ್ತಾ, ರಾಗಿ ಬೀಸುತ್ತಾ 'ಬೆಳಗಾಗಿ ನಾನೆದ್ದು ಯಾರ್‍ಯಾರ ನೆನೆಯಲಿ' ಎಂದು ಹಾಡುತ್ತಿದ್ದವರು, ಇಂದು ಕುಟ್ಟುವ, ಬೀಸುವ ಕೆಲಸವಿಲ್ಲದೆ ಪ್ಲೋರ್‌ಮಿಲ್ ಬಂದುದರ ಫಲವಾಗಿ ಯಾಂತ್ರಿಕತೆ ಆವರಿಸಿದೆ. ಹಾಗೆಯೇ ಆಧುನಿಕತೆಯ ಫಲವಾಗಿ ಯಂತ್ರಗಳಿಂದ ತಯಾರಾದ ಕುಡಿಗೋಲು, ನೇಗಿಲು ಮೊದಲಾದ ಸಾಮಾಗ್ರಿಗಳು ನೇರವಾಗಿ ಮಾರುಕಟ್ಟೆಯಲ್ಲಿ ಲಭ್ಯವಾಗುತ್ತಿರುವುದರ ಫಲವಾಗಿ ಗ್ರಾಮದ ಕಮ್ಮಾರರಿಗೆ ಕೆಲಸವಿಲ್ಲದಂತಾಗಿದೆ. ಒಂದೆಡೆ ಸಂತೋಷದ ಸಂಗತಿಯಾದರೆ ಮತ್ತೊಂದೆಡೆ ವಿಷಾದ. ಗುಡಿಕೈಗಾರಿಕೆಗಳ ಅವನತಿ. ಇಷ್ಟರ ನಡುವೆಯೂ ಈ ಗ್ರಾಮದಲ್ಲಿ ಕಮ್ಮಾರಿಕೆ ಇನ್ನೂ ಜೀವ ಹಿಡಿದು ಬದುಕಿದೆ. ಹಾಗೂ ಚಾಪೆ ಎಣೆಯುವವರು ತಮ್ಮ ಕಸುಬನ್ನು ನಿಲ್ಲಿಸದೆ ಮುಂದುವರೆಸಿಕೊಂಡು ಬರುತ್ತಿದ್ದಾರೆ.

ಸಾಂಸ್ಕೃತಿಕ ಮನೋರಂಜನೆಯನ್ನು ಅತ್ಯಂತ ಪ್ರಭಾವಶಾಲಿಯಾಗಿ ಉಂಟುಮಾಡುತ್ತಿದ್ದ ಉತ್ಸವ, ಹಬ್ಬ-ಹರಿದಿನಗಳು ತಮ್ಮ ಮೊದಲಿನ ಪ್ರಭಾವದಿಂದ ಹಿಂದೆ ಬೀಳುತ್ತಿರಲು ಕಾರಣವೆಂದರೆ ಆಧುನಿಕತೆಯ ಪ್ರಭಾವಗಳು ಗ್ರಾಮೀಣರ ಹೃದಯದ ಅಂತರಾಳವನ್ನು ಪ್ರವೇಶಿಸಿರುವುದು. ಹಾಗೆಂದು ನವನಾಗರೀಕತೆಯ ಅಗತ್ಯವಿಲ್ಲವೆಂದಲ್ಲ. ಅದರ ನಡುವೆಯೂ ಕೂಡ ಒಳ್ಳೆಯ ಆಚರಣೆಗಳು ಅಗತ್ಯವೆಂದು ನನ್ನ ನಿಬಂಧದ ಆಶಯವು ಕೂಡ.

ಈ ಗುಬ್ಬಹಳ್ಳಿ ಗ್ರಾಮದಲ್ಲಿ ಲಿಂಗಾಯಿತರು, ಕುರುಬಜನಾಂಗದವರು, ದೇವಾಂಗದವರು, ವಿಶ್ವಕರ್ಮದವರು, ಮಡಿವಾಳರು, ನಾಯಕರು, ಗಾಣಿಗರು ಕಂಡುಬರುತ್ತಾರೆ. ಇಲ್ಲಿ ಒಕ್ಕಲಿಗರು ಬ್ರಾಹ್ಮಣರು, ವೈಶ್ಯರು, ಕುಂಬಾರರು, ಹರಿಜನರು ಮೊದಲಾದ ಕೆಲವು ಜನಾಂಗದವರು ಇಲ್ಲದಿರುವುದು ಒಂದು ವಿಶೇಷ. ಹಿಂದೂ ಅಲ್ಲದ ಬೇರೆ ಯಾವ ಧರ್ಮದವರು ಈ ಗ್ರಾಮದಲ್ಲಿ ಇರುವುದಿಲ್ಲ. ಈ ಗ್ರಾಮದಲ್ಲಿ ಮೇಲೆ ಹೇಳಿದ ಏಳೆಂಟು ಜನಾಂಗದವರು ವಾಸವಾಗಿದ್ದು, ಸುಮಾರು ೧೬೦ ಮನೆಗಳನ್ನು ಒಳಗೊಂಡಿದೆ ಈ ಗ್ರಾಮ. ಆದರೆ ಎಂದೂ ಇಲ್ಲಿ ಜಾತಿ–ಜಾತಿಗಳ ನಡುವಿನ ವೈಷಮ್ಯವಾಗಲಿ, ಕೋಮುಗಲಭೆಯಾಗಲಿ ಕಂಡುಬಂದಿಲ್ಲ. ಬದಲಿಗೆ ಎಲ್ಲರೂ ಸಹಕಾರ ಮನೋಭಾವನೆಯಿಂದಲೇ ಇಂದಿಗೂ ಒಬ್ಬರನೊಬ್ಬರು ಅರಿತುಕೊಂಡು ಬಾಳುತ್ತಿದ್ದಾರೆ. ಇವರ ಸಹಕಾರಕ್ಕೆ ನಿದರ್ಶನಗಳೆಂಬಂತೆ ಮಡಿವಾಳರಿಗೆ ಹಿಂದೆಕೊಡುತ್ತಿದ್ದ ಹಡದೆ ಭತ್ತ, ಕಮ್ಮಾರರಿಗೆ ಕೊಡುತ್ತಿದ್ದ ಅರುಲ್ಲು, ನಯನಜಕ್ಷತ್ರಿಯರಿಗೆ ಕೊಡುತ್ತಿದ್ದ ಹಡದೆ ಭತ್ತ ಇವುಗಳು ಇನ್ನೂ ಜೀವಂತ ಸಾಕ್ಷಿಯಾಗಿವೆ.

ಆಧುನಿಕತೆಯ ಸ್ಪರ್ಶದಿಂದಾಗಿ ಈ ಗ್ರಾಮಕ್ಕೆ 'ನೀರು ಬಳಕೆದಾರರ ಸಂಘ (ಕಾಡಯೋಜನೆ)' ಅಸ್ತಿತ್ವದಲ್ಲಿದೆ. ಇದೇ ಗ್ರಾಮದ ಜಿ.ಸಿ.ಸ್ವಾಮಿ ಎಂಬುವವರು ಇದರ ಕಾರ್ಯದರ್ಶಿಯಾಗಿದ್ದಾರೆ. ಈ ಕೆಲವು ವರ್ಷಗಳ ಹಿಂದೆ 'ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ' ಅಸ್ತಿತ್ವಕ್ಕೆ ಬಂದಿದ್ದು ಇದಕ್ಕೆ ಶ್ರೀಮತಿ ವನಿತ ಎಂಬುವವರು ಕಾರ್ಯದರ್ಶಿಯಾಗಿರುತ್ತಾರೆ. ಈ ಗ್ರಾಮದಿಂದ ಗ್ರಾಮಪಂಚಾಯಿತಿ ಸದಸ್ಯರಾಗಿ ಶಂಕರಪ್ಪ (ಕುಮಾರಣ್ಣ) ಎಂಬುವರು ಹಾಗೂ ಕುಮಾರೇಗೌಡ ಎಂಬುವವರು ಆಯ್ಕೆಯಾಗಿರುತ್ತಾರೆ. ಇಷ್ಟೆಲ್ಲದರ ನಡುವೆಯೂ ಒಂದು ವಿಷಾದದ ಸಂಗತಿ ಎಂದರೆ ಸಾರಿಗೆ ಸಂಪರ್ಕದ ಬಸ್‌ನ ಸೌಲಭ್ಯವಿಲ್ಲದೆ ನಡೆದಾಡುವ ಪರಿಸ್ಥಿತಿಯೇ ಮುಂದುವರೆದಿರುವುದು.

ಒಟ್ಟಾರೆಯಾಗಿ ಈ ನಿಬಂಧವು ಆರಂಭದ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯನ್ನು, ದ್ವಿತೀಯ ಭಾಗದಲ್ಲಿ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆಯನ್ನು, ತೃತೀಯ ಭಾಗವು ದೇವಾಲಯಗಳು, ಉತ್ಸವಗಳು ಮತ್ತು ಹಬ್ಬಗಳನ್ನು, ನಾಲ್ಕನೇ ಅಧ್ಯಾಯವು ವಿಶೇಷ ನಂಬಿಕೆಗಳು ಮತ್ತು ಸಂಪ್ರದಾಯಗಳನ್ನು, ಐದನೇ ಅಧ್ಯಾಯವು ಕಲೆ ಮತ್ತು ಕಲಾವಿದರನ್ನು, ಕೊನೆಯ ಅಧ್ಯಾಯವು ಶೈಕ್ಷಣಿಕ, ಆರ್ಥಿಕ, ಸಾಮಾಜಿಕ ಬದುಕನ್ನು ಹೊಂದಿದ್ದು, ಉಪಸಂಹಾರದೊಂದಿಗೆ, ವಕ್ತೃಸೂಚಿ, ಪರಾಮರ್ಶನ ಗ್ರಂಥಗಳೊಂದಿಗೆ ಮುಕ್ತಾಯವಾಗುತ್ತದೆ.

# ಅನುಬಂಧ

ಗುಬ್ಬಹಳ್ಳಿ ಗ್ರಾಮವು ಕರ್ನಾಟಕ ರಾಜ್ಯದ, ಇಪ್ಪತ್ತೆಂಟು ಜಿಲ್ಲೆಗಳಲ್ಲಿ ಒಂದಾದ ಮಂಡ್ಯ ಜಿಲ್ಲೆಯ, ಕೃಷ್ಣರಾಜಪೇಟೆ ತಾಲ್ಲೂಕಿನ, ಅಕ್ಕಿಹೆಬ್ಬಾಳು ಹೋಬಳಿಯ, ಬೀರವಳ್ಳಿ ಗ್ರಾಮ ಪಂಚಾಯಿತಿ ವ್ಯಾಪ್ತಿಗೆ ಬರುವ ಒಂದು ಚಿಕ್ಕ ಗ್ರಾಮವಾಗಿದೆ.

ಈ ಗ್ರಾಮದ ಪೂರ್ವ ದಿಕ್ಕಿನಲ್ಲಿ ಹೊಸಗದ್ದೆ ಗ್ರಾಮ (ಈಗ ಈ ಊರು ಇಲ್ಲ ಹಿಂದೆ ಇತ್ತಂತೆ) ಮತ್ತು ಸಾಕ್ಷಿಬೀಡು ಗ್ರಾಮಗಳು ಇರುತ್ತವೆ. ಪಶ್ಚಿಮ ದಿಕ್ಕಿನಲ್ಲಿ ಕೆ.ಆರ್.ನಗರ ತಾಲ್ಲೂಕಿಗೆ ಸೇರಿದ ಗುಳುವಿನಅತ್ತಿಗುಪ್ಪೆ ಗ್ರಾಮ ಇದೆ. ಉತ್ತರ ದಿಕ್ಕಿನಲ್ಲಿ ಹಂದಿಬೀಕನಹಳ್ಳಿ ಗ್ರಾಮ ಇದೆ. ದಕ್ಷಿಣ ದಿಕ್ಕಿನಲ್ಲಿ ಮಠದ ಕಾವಲುಗಡಿ ಇದೆ. ಇಲ್ಲಿ ಮರ ಕಟ್ಟೆ (ಒಂದು ಚಿಕ್ಕ ಕೆರೆ ಅಥವಾ ಕಟ್ಟೆ) ಕಂಡು ಬರುತ್ತದೆ.

ಈ ಗುಬ್ಬಹಳ್ಳಿ ಪ್ರದೇಶವು ಮರಳು ಮಿಶ್ರಿತ ಕೆಂಪು ಮಣ್ಣಿನಿಂದ ಕೂಡಿದೆ. ಕೆಲವು ಕಡೆ ಜೇಡಿ ಮಣ್ಣಿನ ಪ್ರದೇಶವಿದೆ. ಪೊದೆ,ಕುಲಚಲು ಗಿಡಗಳಿಂದ ಹಾಗೂ ಬೇವಿನಮರ, ಗಂಧದ ಮರಗಳು, ಹಲಸಿನ ಮರಗಳು, ಮಾವಿನ ಮರಗಳು, ಚುಜ್ಜಲಿ ಮರಗಳು, ಕರಂಚಿ ಮರಗಳು ಕಂಡು ಬರುತ್ತವೆ. ಈ ಪ್ರದೇಶದ ಕಾಡಿನಲ್ಲಿ ಕಾಡು ಹಂದಿಗಳು, ತೋಳಗಳು, ಗುಳ್ಳೆ ನರಿಗಳು, ಮೊಲಗಳು, ನವಿಲುಗಳು, ಅಲ್ಲಲಿ ಜಿಂಕೆಗಳು ಕಂಡು ಬರುತ್ತವೆ.

ಈ ಗ್ರಾಮಕ್ಕೆ ಮುಂಗಾರು ಮತ್ತು ಹಿಂಗಾರು ಮಾರುತಗಳಿಂದ, ಏಪ್ರಿಲ್ ನಿಂದ ನವೆಂಬರ್ ವರೆಗೆ ನೈರುತ್ಯ ಮಾರುತಗಳಿಂದ ಮಳೆಯಾಗುವುದು, ಅಕ್ಟೋಬರ್ ತಿಂಗಳಿನಲ್ಲಿ ಹೆಚ್ಚು ಮಳೆಯಾಗುತ್ತದೆ. ಬೇಸಿಗೆಯಲ್ಲಿ ಸಾಮಾನ್ಯ ಉಷ್ಣಾಂಶವಿದ್ದು, ಮಳೆಗಾಲದಲ್ಲಿ ಸಮ ಪ್ರಮಾಣದ ಮಳೆ ದಾಖಾಲಾದ ನಿರೂಪಣೆಗಳಿವೆ.

ಈ ಗ್ರಾಮದಲ್ಲಿ ಕಂಡು ಬರುವ ದೇವಾಲಯಗಳೆಂದರೆ, ಮಾರಮ್ಮನಗುಡಿ, ಬಸವೇಶ್ವರನಗುಡಿ, ದೇವೀರಮ್ಮನ ದೇವಸ್ಥಾನ, ಉಜ್ಜಿಲಿಲಿಂಗೇಶ್ವರ ಹಾಗೂ ಈರಣ್ಣ-ದೂತಣರ ದೇವಸಾನಗಳಿವೆ. ಮಾರಮ್ಮನ ಹಬ್ಬ, ಬಸವೇಶ್ವರನ ಹಬ್ಬ, ದೇವೀರಮ್ಮನ ಹಬ್ಬ, ಉಜ್ಜಿಲಿಲಿಂಗೇಶ್ವರ ಹಾಗೂ ಈರಣ್ಣ-ದೂತಣ್ಣರ ಹಬ್ಬಗಳು ಇಲ್ಲಿಯ ವಿಶೇಷ: ಉಳಿದಂತೆ ಕೆಲವು ಕೃಷಿ ಸಂಬಂಧಿ ಹಾಗೂ ಸಾರ್ವತ್ರಿಕ ಹಬ್ಬಗಳು ಕಂಡು ಬರುತ್ತವೆ.

ಈ ಗ್ರಾಮದ ವಿಶೇಷ ನಂಬಿಕೆಗಳು ಮತ್ತು ಸಂಪ್ರದಾಯಗಳಲ್ಲಿ ಕುಂಬಾರರು ಮತ್ತು ಹರಿಜನರು ವಾಸಿಸದೆ ಇರುವುದು, ಇಲ್ಲಿನ ಕೆರೆಯಲ್ಲಿ ಹೆಂಗಸರ ಬಟ್ಟೆ ಒಗೆಯದೆ ಇರುವುದು, ಕೆರೆ ಏರಿಯ ಮೇಲೆ ಗರ್ಭಿಣಿಯರು, ಮುಟ್ಟಾದವರು ಓಡಾಡದೆ ಇರುವುದು. ಹೀಗೆ ಈ ಗ್ರಾಮವು ತನ್ನ ಒಡಲಿನಲ್ಲಿ ವಿಶೇಷ ಹಾಗೂ ವೈಶಿಷ್ಟತೆಯನ್ನು ಹೊತ್ತಿದೆ.

# ವಕ್ತೃಸೂಚಿ

## ಅಧ್ಯಾಯ – ೨

| ಕ್ರಮ ಸಂಖ್ಯೆ | ಹೆಸರು | ವಯಸ್ಸು | ಊರು | ವೃತ್ತಿ |
|---|---|---|---|---|
| ೪ | ಜಿ.ಜೆ.ರೇವಣ್ಣ | ೨೮ ವರ್ಷ | ಗುಬ್ಬಹಳ್ಳಿ | ಕೆ.ಪಿ.ಟಿ.ಸಿ.ಎಲ್ ನೌಕರ |
| ೫ | ಮಾಜಿ ಛೇರ್ಮನ್ ನಂಜುಂಡಪ್ಪ | ௭೩ ವರ್ಷ | ಗುಬ್ಬಹಳ್ಳಿ | ಕೃಷಿಕರು |
| ೬ | ಸಿ.ಶಿವನಂಜಪ್ಪ | ೭೦ ವರ್ಷ | ಗುಬ್ಬಹಳ್ಳಿ | ಕೃಷಿಕರು |
| ೭ | ಜಗದೀಶ್ | ೩೩ ವರ್ಷ | ಗುಬ್ಬಹಳ್ಳಿ | ಚಾಲಕರು |

## ಅಧ್ಯಾಯ – ೩

| ಕ್ರಮ ಸಂಖ್ಯೆ | ಹೆಸರು | ವಯಸ್ಸು | ಊರು | ವೃತ್ತಿ |
|---|---|---|---|---|
| ೨ | ಕೃಷ್ಣನಾಯಕ | ೪೬ ವರ್ಷ | ಗುಬ್ಬಹಳ್ಳಿ | ಕೃಷಿಕರು |
| ೩ | ಚೆನ್ನಶೆಟ್ಟಿ | ೫೦ ವರ್ಷ | ಗುಬ್ಬಹಳ್ಳಿ | ಕೃಷಿಕರು |
| ೪ | ಜಿ.ವಿ.ನಂಜಪ್ಪ | ೪೮ ವರ್ಷ | ಗುಬ್ಬಹಳ್ಳಿ | ಕೃಷಿಕರು |
| ೫ | ಪಟೇಲ್ ಚನ್ನಬಸಪ್ಪ | ೬೩ ವರ್ಷ | ಗುಬ್ಬಹಳ್ಳಿ | ಕೃಷಿಕರು |
| ೬ | ಮಾಜಿಛೇರ್ಮನ್ ನಂಜುಂಡಪ್ಪ | ೭೩ ವರ್ಷ | ಗುಬ್ಬಹಳ್ಳಿ | ಕೃಷಿಕರು |
| ೭ | ಶಂಕರಪ್ಪ (ಕುಮಾರಣ್ಣ) | ೫೧ ವರ್ಷ | ಗುಬ್ಬಹಳ್ಳಿ | ಕೃಷಿಕರು |
| ೮ | ಜಿ.ಸಿ.ಸ್ವಾಮಿ | ೩೫ ವರ್ಷ | ಗುಬ್ಬಹಳ್ಳಿ | ಕಾರ್ಯದರ್ಶಿ (ಕಾಡಯೋಜನೆ) |
| ೯ | ಸುಬ್ಬೇಗೌಡರು | ೭೦ ವರ್ಷ | ಗುಬ್ಬಹಳ್ಳಿ | ಕೃಷಿಕರು |
| ೧೦ | ಕುಮಾರ | ೩೦ ವರ್ಷ | ಗುಬ್ಬಹಳ್ಳಿ | ಕೃಷಿಕರು |
| ೧೧ | ಪಟೇಲ್ ಚನ್ನಬಸಪ್ಪ | ೬೩ ವರ್ಷ | ಗುಬ್ಬಹಳ್ಳಿ | ಕೃಷಿಕರು |
| ೧೨ | ಜಗದೀಶ್ | ೩೩ ವರ್ಷ | ಗುಬ್ಬಹಳ್ಳಿ | ಚಾಲಕರು |
| ೧೩ | ಜಿ.ಸಿ.ಸ್ವಾಮಿ | ೩೫ ವರ್ಷ | ಗುಬ್ಬಹಳ್ಳಿ | ಕಾರ್ಯದರ್ಶಿ (ಕಾಡ ಯೋಜನೆ) |
| ೧೪ | ಜಿ.ವಿ.ನಂಜಪ್ಪ | ೪೮ ವರ್ಷ | ಗುಬ್ಬಹಳ್ಳಿ | ಕೃಷಿಕರು |
| ೧೫ | ಜಗದೀಶ್ | ೩೩ ವರ್ಷ | ಗುಬ್ಬಹಳ್ಳಿ | ಚಾಲಕರು |

## ಅಧ್ಯಾಯ ನಾಲ್ಕು

| ಕ್ರಮ ಸಂಖ್ಯೆ | ಹೆಸರು | ವಯಸ್ಸು | ಊರು | ವೃತ್ತಿ |
|---|---|---|---|---|
| ೨ | ಮಾಜಿಛೇರ್ಮನ್ ನಂಜುಂಡಪ್ಪ | ೭೩ ವರ್ಷ | ಗುಬ್ಬಹಳ್ಳಿ | ಕೃಷಿಕರು |
| ೩ | ಸಿ.ಶಿವನಂಜಪ್ಪ | ೭೦ ವರ್ಷ | ಗುಬ್ಬಹಳ್ಳಿ | ಕೃಷಿಕರು |
| ೪ | ಶಂಕರಪ್ಪ(ಕುಮಾರಣ್ಣ) | ೫೧ ವರ್ಷ | ಗುಬ್ಬಹಳ್ಳಿ | ಕೃಷಿಕರು |
| ೫ | ದೊಡ್ಡನಿಂಗಯ್ಯ | ೫೦ ವರ್ಷ | ಗುಬ್ಬಹಳ್ಳಿ | ಕೃಷಿಕರು |

## ಅಧ್ಯಾಯ ಐದು

| ಕ್ರಮ ಸಂಖ್ಯೆ | ಹೆಸರು | ವಯಸ್ಸು | ಊರು | ವೃತ್ತಿ |
|---|---|---|---|---|
| ೨ | ಲಿಂಗಪ್ಪ | ೭೩ ವರ್ಷ | ಗುಬ್ಬಹಳ್ಳಿ | ಕೃಷಿಕರು |
| ೩ | ಬಿ.ಪುಟ್ಟಗೌರಮ್ಮ | ೭೬ ವರ್ಷ | ಗುಬ್ಬಹಳ್ಳಿ | ಕೃಷಿಕರು |
| ೪ | ಜವರನಾಯಕ | ೫೦ ವರ್ಷ | ಗುಬ್ಬಹಳ್ಳಿ | ಕೃಷಿಕರು |
| ೫ | ಬೋಜೇಗೌಡ | ೩೫ ವರ್ಷ | ಗುಬ್ಬಹಳ್ಳಿ | ಕೃಷಿಕರು |
| ೬ | ನಿಂಗರಾಜಮ್ಮ | ೭೫ ವರ್ಷ | ಗುಬ್ಬಹಳ್ಳಿ | ಗೃಹಿಣಿ |

## ಅಧ್ಯಾಯ ಆರು

| ಕ್ರಮ ಸಂಖ್ಯೆ | ಹೆಸರು | ವಯಸ್ಸು | ಊರು | ವೃತ್ತಿ |
|---|---|---|---|---|
| ೧ | ಮಾಜಿಛೇರ್ಮನ್ ನಂಜುಂಡಪ್ಪ | ೭೩ ವರ್ಷ | ಗುಬ್ಬಹಳ್ಳಿ | ಕೃಷಿಕರು |

## ಪರಾಮರ್ಶನ ಗ್ರಂಥಗಳು

೧. ಸಾಂಸ್ಕೃತಿಕ ಅಧ್ಯಯನ– ರೆಹಮತ್ ತರೀಕೆರೆ

೨. ಜಾನಪದ ತುಂಬುಹೊಳೆ – ಡಿ..ಆರ್. ನಾಗರಾಜು

೩. ಕರ್ನಾಟಕ ಗ್ರಾಮ ಸೂಚಿ – ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ

೪. ಸುವರ್ಣ ಮಂಡ್ಯ – ಸಂಪಾದಕ ಡಾ. ದೇಜಗೌ

೫. ಕೃಷ್ಣರಾಜಪೇಟೆ ತಾಲ್ಲೂಕು ದರ್ಶಿನಿ – ಕೆ. ಕಾಳೇಗೌಡ

೬. ಜನಪದ ಸಮಾಜ ಮತ್ತು ಸಂಸ್ಕೃತಿ – ಡಾ.ಕೆ.ಜಿ.ಗುರುಮೂರ್ತಿ

೭. ಕನ್ನಡ ಸಾಹಿತ್ಯ ಕೋಢ – ಸಂಪಾದಕ ರಾಜಪ್ಪದಳವಾಯಿ

೮. ಕರ್ನಾಟಕ ಸಂಗೀತ – ಸಾರ್ವಜನಿಕ ಶಿಕ್ಷಣ ಇಲಾಖೆ, ಕರ್ನಾಟಕ ಸರ್ಕಾರ

೯. ನೆನಮುಗಳು ಸಾಯುವುದಿಲ್ಲ – ಸಂಪಾದಕ ಆರ್. ರಾಜಪ್ಪದಳವಾಯಿ

೧೦. ಆಧುನಿಕ ಭಾರತದ ಆರ್ಥಿಕಾಭಿವೃದ್ಧಿ – ಎಚ್.ಆರ್. ಕೃಷ್ಣಯ್ಯಗೌಡ

